# ಎಸ್.ಎಸ್. ಕುಕ್ಕೆ
# S.S. KUKKE

ವಿ.ಟಿ.ಎಸ್.ರಾವ್



ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು

**S.S.KUKKE:** A Monograph on the Life & Works of S.S.Kukke (Kannada & English) by V.T.S.Rao, Published by Indiramma H.V., Registrar, Karnataka Lalithakala Academy, Kannada Bhavana, J.C. Road, Bangalore-560 002

First impression: 1997
Second impression: 2018

Price: 65
Pages: 48 + 8
Copies: 1000
Paper Used : 80GSM Maplitho





ಪ್ರಕಾಶಕರು:
ಇಂದ್ರಮ್ಮ.ಹೆಚ್.ವಿ
ರಿಜಿಸ್ಟ್ರಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ

ಮುದ್ರಕರು:
ತುಷಿತ ಪ್ರಿಂಟ್ ಆರ್ಟ್
ಎಸ್.ಆರ್.ನಗರ, ಬೆಂಗಳೂರು
ಮೊ. : 8861712637

# ಅಧ್ಯಕ್ಷರ ನುಡಿ

ಕಲಾವಿದ ಎಸ್.ಎಸ್. ಕುಕ್ಕೆಯವರು ಸಂಸ್ಕೃತ ವಿದ್ವಾಂಸರಾದ ಪಂಡಿತರತ್ನ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳ ಪುತ್ರರಾಗಿದ್ದವರು. ಶಾಸ್ತ್ರಿಗಳು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಸ್ಥಾನದ ಪಂಡಿತರತ್ನರಲ್ಲೊಬ್ಬರು. ಈ ಹಿನ್ನೆಲೆಯಿಂದಾಗಿ ಕಲಾವಿದ ಕುಕ್ಕೆಯವರು ಚಿತ್ರಿಸಿದ ಪೌರಾಣಿಕ ಚಿತ್ರಗಳಿಗೊಂದು ಅಧಿಕಾರಸ್ಥ ಗುಣ ಲಭಿಸಿದೆ. ಜಲವರ್ಣ ಚಿತ್ರರಚನೆಯಲ್ಲಿ ನೈಪುಣ್ಯತೆ ಸಾಧಿಸಿದ್ದರು ಕುಕ್ಕೆಯವರು. ನಿಸರ್ಗಚಿತ್ರಣ, ಭಾವಚಿತ್ರಣ, ಜಿಕಣಿಚಿತ್ರ ಅಥವಾ ಮಿನಿಯೇಚರ್ ಚಿತ್ರಗಳ ಸೂಕ್ಷ್ಮತೆ ಇದೆ. ಕುಕ್ಕೆಯವರಿಗೆ ತಮ್ಮದೇ ಆದ, ತಮ್ಮ ಕೃತಿಗಳ ಸಂಗ್ರಹಾಲಯವೊಂದನ್ನು ಬೆಂಗಳೂರಿನಲ್ಲಿ ಸ್ಥಾಪಿಸಬೇಕೆಂಬ ಮಹದೋದ್ದೇಶವಿತ್ತು. ಅಂತೆಯೇ ಸಾಕಷ್ಟು ಖರ್ಚು ಮಾಡಿ ಸ್ಥಾಪಿಸಿದರೂ ಸಹ. ಸ್ವತಃ ಆರ್ಟ್ ಸ್ಟುಡಿಯೋವನ್ನು ನಡೆಸುತ್ತಿದ್ದ ಇವರಿಗೆ ಆ ಕಾಲಕ್ಕೆ ಕಲಾವಿದರಾಗಿ ಬದುಕು ದೂಡುವ ಸವಾಲನ್ನು ಧೈರ್ಯವಾಗಿಯೇ ಎದುರಿಸಿದ್ದರು. ರುಮಾಲೆ ಚೆನ್ನಬಸಪ್ಪ, ಪಾವಂಜೆ, ಈಗ ಕೆ.ಎನ್. ರಾಮಚಂದ್ರನ್ ಅವರುಗಳ ಕೃತಿಗಳು ವೈಯಕ್ತಿಕ ಸಂಗ್ರಹಾಲಯಗಳಲ್ಲಿ ಅಲ್ಪಕಾಲಾವಧಿಗಾದರೂ ಶೇಖರಗೊಳ್ಳುವ ಭಾಗ್ಯ ಪಡೆದಿದ್ದವು. ಕೆ. ವೆಂಕಟಪ್ಪನವರು ಮನೆಯನ್ನೇ ಪ್ರದರ್ಶನಾಲಯವನ್ನಾಗಿಸಿದ ರೂಢಿಯ ಮುಂದುವರೆದ, ಸಂಕೀರ್ಣಾವಸ್ಥೆಯಿದು. ಆದರೆ ಪ್ರೇಕ್ಷಕರೇ ಬರದಿದ್ದಾಗ ಕುಕ್ಕೆಯವರ ಮಕ್ಕಳು ಒಂದುಗೂಡಿ ಅವರ ಪ್ರಮುಖ ಕೃತಿಗಳ ಸಂಗ್ರಹವನ್ನು ಚಿತ್ರಕಲಾ ಪರಿಷತ್ತಿನ ಸಂಗ್ರಹಾಲಯಕ್ಕೆ ೧೯೯೦ರ ದಶಕದಲ್ಲಿ ಕೊಡುಗೆ ನೀಡಿದರು. ಈಗ "ಎಸ್.ಎಸ್. ಕುಕ್ಕೆ" ಸಂಗ್ರಹಾಲಯ ಎಂಬ ಒಂದು ಪ್ರತ್ಯೇಕ ವಿಭಾಗವೇ ಪರಿಷತ್ತಿನಲ್ಲಿದೆ. ಐತಿಹ್ಯ ಹಾಗೂ ಪುರಾಣಗಳಿಗೆ ಸಮಕಾಲೀನ ಪರಿಕಲ್ಪನೆಯನ್ನು ಬೆರೆಸುವ ಜಲವರ್ಣದ ಸೂಕ್ಷ್ಮದ ಸಾಮರ್ಥ್ಯವಿದ್ದ ಕುಕ್ಕೆಯವರು ದೈನಂದಿನ ಬದುಕು ಹಾಗೂ ಆರೋಗ್ಯದ ದೆಸೆಯಿಂದ ಬಹಳ ಜರ್ಜರಿತರಾಗಿದ್ದರು. ಅಂತಹ ಕ್ಷಣಗಳಲ್ಲಿ ಕಲಾಕೃತಿ ರಚನೆ ಇವರಿಗೆ ವರವಾಗಿ, ಔಷಧವಾಗಿ ಒದಗಿಬಂದಿತ್ತು.

ಇವರ ಧೀಮಂತ, ಕಲಾತ್ಮಕ ಕೃತಿಗಳನ್ನು ಪುರಾಣದ ಓದಿನೊಂದಿಗೆ ಬೆಸೆದಾಗ ರೂಢಿಗಿಂತಲೂ ಬೇರೆಯೆ ಆದ ದೃಶ್ಯಾವಳಿ ನಮಗೆ ಒದಗಿ ಬರುತ್ತದೆ. ಜಾನಪದದ ಮುಖೇನ ಪುರಾಣವನ್ನು ಗ್ರಹಿಸುವ ರೀತಿ ಅವರ ಚಿತ್ರಣ. ಕುಕ್ಕೆಯವರ ನಿಕಟವರ್ತಿಗಳೂ, ಎನ್.ಜೆ. ಪಾವಂಜೆಯವರ ಶಿಷ್ಯರೂ ಆಗಿದ್ದ ವಿ.ಟಿ.ಎಸ್. ರಾವ್ ಅವರು ಬಹಳ ಶ್ರದ್ಧೆಯಿಂದ ಬರೆದ ಈ ಪುಸ್ತಕವು ಸರಿಯಾಗಿ ಇಪ್ಪತ್ತು ವರ್ಷದ ನಂತರ ಮರುಮುದ್ರಣಗೊಳ್ಳುತ್ತಿದೆ. ಓದುಗರು ಇಲ್ಲಿನ ಬರವಣಿಗೆ ಹಾಗೂ ಚಿತ್ರಗಳನ್ನು ಆಸ್ವಾಧಿಸಿ, ಸಮಕಾಲೀನ ಸಂದರ್ಭದಲ್ಲಿ ಪುರಾಣಗಳನ್ನು ಗ್ರಹಿಸುವ ವಿಭಿನ್ನ ಕ್ರಮಗಳ ಪ್ರಯೋಗಗಳನ್ನು ಮೆಚ್ಚಿಕೊಳ್ಳುತ್ತೀರಿ ಎಂಬ ವಿಶ್ವಾಸದೊಂದಿಗೆ,

ಶ್ರೀ ಎಸ್.ಎಸ್.ಕುಕ್ಕೆ ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಸದರಿ ಪುಸ್ತಕವನ್ನು ಮರುಮುದ್ರಣ ಮಾಡಲಾಗುತ್ತಿದೆ. ಈ ಮರು ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಕಾರ್ಯ ಸಮಿತಿ ಸದಸ್ಯರಿಗೂ, ಪುಸ್ತಕದ ಸಂಪಾದಕರಿಗೂ, ಪ್ರಕಟಣಾ ಸಲಹಾ ಸಮಿತಿ ಸದಸ್ಯರಿಗೂ, ಅಕಾಡೆಮಿಯ ರಿಜಿಸ್ಟ್ರಾರ್ ಆದ ಶ್ರೀಮತಿ ಇಂದ್ರಮ್ಮ.ಹೆಚ್.ವಿ ಅವರಿಗೂ, ಅಕಾಡೆಮಿಯ ಸಿಬ್ಬಂದಿಗಳಿಗೂ ಮತ್ತು ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಮಾಲೀಕರು, ತುಷಿತ ಪ್ರಿಂಟ್ ಆರ್ಟ್, ಬೆಂಗಳೂರು ಇವರಿಗೂ ಅಕಾಡೆಮಿಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**ಪ್ರೊ. ಎಂ.ಜೆ. ಕಮಲಾಕ್ಷಿ**
ಅಧ್ಯಕ್ಷರು
ಹಾಗೂ ಗೌರವ ಸಂಪಾದಕರು

# ಒಂದು ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವುದೂ ಒಂದು. ಈ ಪುಸ್ತಕಗಳು ಆ ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದು ಬಂದ ದಾರಿ ಮತ್ತು ಅವರ ಜೀವನ ಚರಿತ್ರೆಯ ಬಗ್ಗೆ ತಿಳುವಳಿಕೆ ಉಂಟು ಮಾಡಲು ಸಹಾಯಕವಾಗಬಲ್ಲದು.

ಈ ಯೋಜನೆಯಲ್ಲಿ ಈಗಾಗಲೇ ಸುಮಾರು ೪೦ ಪುಸ್ತಕಗಳು ಪ್ರಕಟಗೊಂಡಿದ್ದು ಇನ್ನು ಹಲವು ಪುಸ್ತಕಗಳು ಹೊರಬರಲಿವೆ. ಈ ಮಾಲಿಕೆಯು ಅತ್ಯಂತ ಜನಪ್ರಿಯವಾಗಿದ್ದು ಅನೇಕ ಪುಸ್ತಕಗಳು ಪುನರ್ ಮುದ್ರಣವಾಗಿರುವುದು, ಅವುಗಳ ಅವಶ್ಯಕತೆ, ಸಾರ್ಥಕತೆಗಳ ದ್ಯೋತಕ.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ ಜೀವನ, ಕೃತಿಯ ಬಗ್ಗೆ ಹೆಚ್ಚು ಅರಿತಿರುವವರು. ಪ್ರಸ್ತುತ, ಈ ಪುಸ್ತಕ ನಾಡಿನ ಹಿರಿಯ ಕಲಾವಿದರಾದ ದಿವಂಗತ ಶ್ರೀ ಎಸ್. ಎಸ್. ಕುಕ್ಕೆಯವರ ಬಗ್ಗೆಯಾಗಿದ್ದು ಅವರು ಚಿತ್ರಕಲಾ ಪ್ರಪಂಚದಲ್ಲಿ ಮಾಡಿರುವ ಸಾಧನೆ ಅಪಾರ. ಈ ಕೃತಿಯನ್ನು ರಚಿಸಿರುವ ಶ್ರೀ ವಿ.ಟಿ.ಎಸ್. ರಾವ್‌ರವರು ನಾಡಿನ ಕಲಾವಿದರು, ಕಲಾ ಬರಹಗಾರರಾಗಿದ್ದು ತಮ್ಮ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದ್ದಾರೆ. ಅವರಿಗೂ ಹಾಗೂ ಈ ಪುಸ್ತಕದ ಸಂಪಾದಕರಾದ ಶ್ರೀ ಚಿ.ಸು. ಕೃಷ್ಣ ಸೆಟ್ಟಿ ಅವರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಎಂದಿನಂತೆ ಕಲಾರಸಿಕರು, ಸಾಹಿತ್ಯಾಭಿಮಾನಿಗಳು ಈ ಕೃತಿಯನ್ನು ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

**ಸಿ. ಚಂದ್ರಶೇಖರ**
ಅಧ್ಯಕ್ಷರು ಹಾಗೂ ಗೌರವ ಸಂಪಾದಕರು
ಕರ್ನಾಟಕ ಲಲಿತಕಲಾ ಅಕಾಡೆಮಿ

# ಪ್ರಕಾಶಕರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ನಾಡಿನ ಕಲಾಪರಂಪರೆಗೆ ತನ್ನದೇ ಆದ ಕೊಡುಗೆ ನೀಡಿದ ಪ್ರಮುಖರಲ್ಲಿ ದಿ. ಶ್ರೀ ಎಸ್.ಎಸ್.ಕುಕ್ಕೆ ಅವರು ಒಬ್ಬರು. ಶ್ರೀಯುತರು ೧೯೧೮ರಲ್ಲಿ ಜನಿಸಿ, ೧೯೯೧ರಲ್ಲಿ ಇಹಲೋಕ ತ್ಯಜಿಸಿದರು. ಕರ್ನಾಟಕ ಲಲಿತಕಲಾ ಅಕಾಡೆಮಿಯು ೧೯೯೭ರಲ್ಲಿ ಶ್ರೀ ಎಸ್.ಎಸ್.ಕುಕ್ಕೆ ಅವರ ಕುರಿತು ಸಂಕ್ಷಿಪ್ತ ಮಾಹಿತಿಯನ್ನು ಒಳಗೊಂಡ ಶ್ರೀ ವಿ.ಟಿ.ಎಸ್.ರಾವ್ ಅವರು ಬರೆದಿರುವ ಪುಸ್ತಕವನ್ನು ಹೊರತರಲಾಗಿತ್ತು. ಶ್ರೀ ಎಸ್.ಎಸ್.ಕುಕ್ಕೆ ಅವರಿಗೆ ನೂರು ವಸಂತಗಳು ತುಂಬಿದ ಸಂದರ್ಭದಲ್ಲಿ ಪುಸ್ತಕವನ್ನು ಮರು ಮುದ್ರಣ ಮಾಡಲಾಗುತ್ತಿದೆ.

ಶ್ರೀ ಎಸ್.ಎಸ್.ಕುಕ್ಕೆ ಅವರ ಚಿತ್ರಗಳ ವಿಶೇಷ ಅಂದರೆ ಭಾರತೀಯ ಸಂವೇದನೆಗಳಿಗನುಗುಣವಾಗಿ ವೈಯುಕ್ತಿಕವಾದ ತಂತ್ರ ಶೈಲಿ, ಕಲಾನೈಪುಣ್ಯತೆಗಳಿಂದ ಸಾಂಪ್ರದಾಯಿಕ ಕಲೆಯ ಮೂಲಭೂತ ಸತ್ವಗಳನ್ನು ರಕ್ತಗತ ಮಾಡಿಕೊಂಡಿದ್ದರು. ಸುಪ್ರಸಿದ್ಧ ಸಾಹಿತ್ಯಿಕ ಮೇರುಕೃತಿಗಳಲ್ಲಿನ ಅಡಕವಾದ ಮಹತ್ವಪೂರ್ಣ ಹಾಗೂ ಅರ್ಥವತ್ತಾದ ಸನ್ನಿವೇಶಗಳನ್ನೂ, ಘಟನೆಗಳನ್ನೂ ಚಿತ್ರಕಲಾಕೃತಿಗಳಾಗಿ ಪರಿವರ್ತಿಸಿದುದು. ಅವರು ಬಳಸುತ್ತಿದ್ದ ನೀಳ ರೇಖೆಗಳದೇ ಒಂದು ವೈಶಿಷ್ಟ್ಯ. ಭಾರತೀಯ ಪೌರಾಣಿಕ ಕಾವ್ಯ ದೃಶ್ಯಗಳಿಗೆ ಪಶ್ಚಿಮದ ಅಕಾಡೆಮಿಕ್ ಸೂತ್ರಗಳನ್ನು ಅನ್ವಯಿಸಿ ಕಲಾಕೃತಿಗಳನ್ನು ರಚಿಸುತ್ತಿದ್ದರು. ಇಂತಹ ಮಹಾನ್ ಕಲಾವಿದರ ಜನ್ಮಶತಮಾನೋತ್ಸವ ಆಚರಿಸುತ್ತಿರುವುದು ಅಕಾಡೆಮಿಗೆ ಹೆಮ್ಮೆಯ ವಿಷಯವಾಗಿದೆ. ಇವರ ಕಲಾಕೃತಿಗಳು ನಾಡಿನೆಲ್ಲಡೆ ಇಂದಿಗೂ ನಮ್ಮನ್ನು ಆಕರ್ಷಿತವಾಗುವಂತೆ ಮಾಡಿವೆ.

ಶ್ರೀ ಎಸ್.ಎಸ್.ಕುಕ್ಕೆ ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಸದರಿ ಪುಸ್ತಕವನ್ನು ಮರುಮುದ್ರಣ ಮಾಡಲಾಗುತ್ತಿದೆ. ಈ ಮರು ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಅಧ್ಯಕ್ಷರಾದ ಆದ ಪ್ರೊ.ಎಂ.ಜೆ.ಕಮಲಾಕ್ಷಿ ಅವರಿಗೂ, ಅಕಾಡೆಮಿಯ ಕಾರ್ಯ ಸಮಿತಿ ಸದಸ್ಯರಿಗೂ, ಪುಸ್ತಕದ ಸಂಪಾದಕರಿಗೂ, ಪ್ರಕಟಣಾ ಸಲಹಾ ಸಮಿತಿ ಸದಸ್ಯರಿಗೂ, ಅಕಾಡೆಮಿಯ ಸಿಬ್ಬಂದಿಗಳಿಗೂ ಮತ್ತು ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಮಾಲೀಕರು, ತುಷಿತ ಪ್ರಿಂಟ್ ಆರ್ಟ್, ಬೆಂಗಳೂರು ಇವರಿಗೂ ಅಕಾಡೆಮಿಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**ಇಂದ್ರಮ್ಮ ಹೆಚ್.ವಿ**
ರಿಜಿಸ್ಟ್ರಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ

## ಎಸ್.ಎಸ್. ಕುಕ್ಕೆ

ಅಂದಿನ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ನಪಾಸಾದ ಒಂಭತ್ತು ವರ್ಷದ ಹುಡುಗನೊಬ್ಬ, ಒಮ್ಮೆ ಶಾಲೆಯಲ್ಲಿ ಉಪಾಧ್ಯಾಯರು ಹೇಳಿ ಕೊಡುತ್ತಿದ್ದ ಪಾಠದ ಕಡೆ ಗಮನ ಕೊಡದೆ, ಅವರ ಮುಖಚರ್ಯೆಯ ತದ್ರೂಪದ ಚಿತ್ರ ಒಂದನ್ನು ಬಿಡಿಸುತ್ತಿದ್ದ. ಹಠಾತ್ತಾಗಿ ಗುರುಗಳು ತಾವು ಮಾಡುತ್ತಿದ್ದ ಪಾಠದ ಮೇಲೆ ನೇರ ಪ್ರಶ್ನೆಯೊಂದನ್ನು ಈ ಹುಡುಗನಿಗೇ ಕೇಳಬೇಕೇ? ಪಾಠದ ಮೇಲಿರಿಸಬೇಕಾಗಿದ್ದ ಗಮನವನ್ನು ಚಿತ್ರ ರಚನೆಯಲ್ಲಿ ಕೇಂದ್ರೀಕರಿಸಿದ್ದುದರಿಂದ ಹುಡುಗ ಉತ್ತರಿಸಲಿಲ್ಲ. ಆವರೆಗೆ ಅದೆಷ್ಟೋ ಬಾರಿ ಹುಡುಗನಲ್ಲಿ ಈ ವರ್ತನೆಯನ್ನು ಕಂಡಿದ್ದ ಗುರುಗಳಿಗೆ ಎಲ್ಲಿಲ್ಲದ ಕೋಪ ಬಂತು. ಹಿಂದಿನಂತೆಯೇ ಈ ಬಾರಿಯೂ ಝಳಪಿಸುವ ನಾಗರಬೆತ್ತ ಹುಡುಗನ ಬೆನ್ನಿಗಾಗಿ ಹುಡುಕಾಡಿತು. ಹತ್ತಿರಕ್ಕೆ ಬಂದು ನೋಡಿದರೆ ಅವನ ಪುಸ್ತಕದಲ್ಲಿ ತಮ್ಮದೇ ಮುಖಭಂಗಿಯ ಚಿತ್ರ. ಮಾಸ್ತರರ ಕೋಪ ನೆತ್ತಿಗೇರಿತು. ನಾಗರಬೆತ್ತ ತನ್ನ ಕೆಲಸ ಮಾಡ ಹತ್ತಿತು. ಹೀಗೆ ಏಟು ತಿಂದು ಸಾಕಾಗಿದ್ದ ಹುಡುಗನಲ್ಲಿದ್ದ ಆತ್ಮಾಭಿಮಾನ ಜಾಗೃತವಾಯಿತು. ಸಧೃಡ ಮೈಕಟ್ಟಿನ ಹುಡುಗನ ಮುಂದೆ ಈ ಕಡ್ಡಿ ಮಾಸ್ತರು ಯಾವ ಲೆಕ್ಕ. ಈಗ ಹುಡುಗನ ಸರದಿ! ಮಾಸ್ತರರ ನಾಗರ ಬೆತ್ತ ಹುಡುಗನ ಕೈಗೆ ಬಂತು. ಬಲವಾಗಿ ನಾಲ್ಕೇಟು ಮಾಸ್ತರರಿಗೇ ಕೊಟ್ಟು ಮುಯ್ಯಿ ತೀರಿಸಿಕೊಂಡ. ಆ ದಿನದ ಮಟ್ಟಿಗೆ ಶಾಲೆಯಲ್ಲಿ ಈ ಹುಡುಗನೇ ಹೀರೋ! ಆದರೆ ಪರಿಣಾಮ ಕೂಡಲೇ ಶಾಲೆಯಿಂದ ಡಿಬಾರಾದ.

ಸುದ್ದಿ ಪಟ್ಟಣವನ್ನೆಲ್ಲಾ ವ್ಯಾಪಿಸಿತು. ಪಂಡಿತ ಪುತ್ರನ ಈ ವರ್ತನೆಗೆ ಕೆಲವರು ನಕ್ಕರು. ಕೆಲವರು ಕುಕ್ಕೆ ಮನೆತನ, ಪಂಡಿತರ ಮನೆತನ, ಇದೆಂತಹ ವಿಪರ್ಯಾಸ ಎಂದು ಬೇಸರಗೊಂಡರು. ದಡ್ಡ ಹುಡುಗನೆಂದು ಮನೆಯವರು ಮಾತ್ರ ಕರೆಯುತ್ತಿದ್ದುದು ಈಗ ಸಾರ್ವತ್ರಿಕವಾಯಿತು. ಹೀಗೆ ಅವನ ಸಾಮಾನ್ಯ ಶಿಕ್ಷಣ ಕೊನೆಗೊಂಡಿತು. ಇಬ್ಬರು ಗಂಡು, ನಾಲ್ಕು ಹೆಣ್ಣು ಮಕ್ಕಳ ತುಂಬು ಸಂಸಾರದಲ್ಲಿ ಈ ಹುಡುಗನೇ ಕೊನೆಯವನು. ಹಾಗಾಗಿ ಈ ಚಿಕ್ಕ ಮಗನಲ್ಲಿ ತಾಯಿಗೆ ಎಲ್ಲಿಲ್ಲದ ಪ್ರೀತಿ. ಜೊತೆಗೆ ಆ ತಾಯಿಗೆ ಈ ಸುಪುತ್ರನ ಜನನಕ್ಕೆ ಮುನ್ನ ಹೊಟ್ಟೆನೋವು ಬರುತ್ತಿತ್ತು. ನಂಜನಗೂಡು ಶ್ರೀಕಂಠೇಶ್ವರನಿಗೆ ಸೇವೆ, ಕಾಣಿಕೆ ಸಮರ್ಪಿಸಿದ ಮೇಲೆ ಸುಖಪ್ರಸವವಾಯಿತು. ಹೊಟ್ಟೆನೋವು ಮಾಯವಾಯಿತು. ಆ ಕಾರಣ ಮಗುವಿಗೆ ಶ್ರೀಕಂಠಶಾಸ್ತ್ರಿ , ಕುಕ್ಕೆ ಎಂದು ನಾಮಕರಣ ಮಾಡಿದರು. ಹೀಗೆ ಆಸ್ಥಾನ ವಿದ್ವಾನ್ ಪಂಡಿತ ರತ್ನ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳ ಮತ್ತು ಶ್ರೀಮತಿ ಸಂಕಮ್ಮನವರ ಕೊನೆಯ ಪುತ್ರನಾಗಿ ಶ್ರೀ ಎಸ್. ಎಸ್. ಕುಕ್ಕೆ ೧೯೧೮ರ ಜೂನ್ ೮ ರಂದು ಶಿವಮೊಗ್ಗದಲ್ಲಿ ಜನ್ಮ ತಾಳಿದರು.

### ಬಾಲ್ಯಜೀವನ

ಕೊನೆಯ ಮಗನಾದುದರಿಂದ ತಾಯಿಯ ಅತಿ ಮುದ್ದಿನಿಂದ ಬೆಳೆದ ಮಗು ಮುಂಜಾನೆ ಆರು ಗಂಟೆಗೇ ತುಂಗಾನದಿಯಲ್ಲಿ ಗೆಳೆಯರೊಂದಿಗೆ ಕುಣಿದು ಕುಪ್ಪಳಿಸಿ ಈಜಾಡಿ ಮನೆ ಸೇರಿದಾಗ ತಾಯಿ ಕಮಾನು ಚೌರ ಮಾಡಿಸಿದ ಮಂಡೆಯಲ್ಲಿದ್ದ ಜಡೆಗೆ

ಹೂಮುಡಿಸಿ ಹಣೆಗೆ ಬೊಟ್ಟನ್ನಿಟ್ಟು , ದಟ್ಟಿಪಂಚೆ, ಕೋಟು ತೊಡಿಸಿ ಹಾಸನದ ಕೆಂಪು ಟೋಪಿಯನ್ನು ತಲೆಯ ಮೇಲಿಟ್ಟು, ಶಾಲೆಗೆ ಹೋಗೆಂದು ಕಳಿಸಿದರೆ ಈ ಹುಡುಗ ಇತರ ಜೊತೆಗಾರರೊಂದಿಗೆ ಹೋಗುತ್ತಿದ್ದುದು ಸ್ಕೂಲಿಗಲ್ಲ, ಹತ್ತಿರದ ಮಾವಿನ ತೋಪಿಗೆ. ಅಲ್ಲಿ ಮರಮಂಗನಾಟ, ಸಿಳ್ಳಂಪಟ್ಟೆ, ಗೋಲಿ, ಚಿಣ್ಣಿಕೋಲು ಈ ಆಟಗಳನ್ನೆಲ್ಲಾ ಮುಗಿಸಿ ಸ್ಕೂಲು ಮುಚ್ಚುವ ವೇಳೆಗೆ ಸರಿಯಾಗಿ ಊಟಕ್ಕೆ ಹಾಜರಾಗುತ್ತಿದ್ದ.

ಆಗಿನ ಕಾಲದ ಶಾಲೆಗಳಲ್ಲಿ ಮಕ್ಕಳನ್ನು ಶಿಕ್ಷಿಸಿದಷ್ಟೂ ಉಪಾಧ್ಯಾಯರ ಕಾರ್ಯಕ್ಷಮತೆ ಹೆಚ್ಚಿನದೆಂಬ ವಿಪರೀತ ಕಲ್ಪನೆ ಇತ್ತು. ಕೈಯಲ್ಲಿ ಬೆತ್ತ ಹಿಡಿದಿರದ ಶಿಕ್ಷಕನ ಚಿತ್ರವನ್ನು ಕಲ್ಪಿಸಿಕೊಳ್ಳುವಂತೆಯೇ ಇರಲಿಲ್ಲ.

## ಕಲಾ ಸಂವೇದನೆ

ಆಗ್ಯೆ ಶಿವಮೊಗ್ಗದಲ್ಲಿ ರಾಮಕೃಷ್ಣರಾವ್ ಎನ್ನುವವರು ಶಾಲೆಯ ಚಿತ್ರಕಲಾ ಶಿಕ್ಷಕ (ಡ್ರಾಯಿಂಗ್ ಮಾಸ್ಟರ್) ಆಗಿದ್ದರು. ಇವರ ಮಗ ಕೆ.ಜಿ. ಮೂರ್ತಿ ಶ್ರೀಕಂಠ ಶಾಸ್ತ್ರಿಯ ಸಹಪಾಠಿ, ಹಾಗೂ ಅಚ್ಚುಮೆಚ್ಚಿನ ಸ್ನೇಹಿತ. ಅವನು ಚಿತ್ರ ಬರೆಯುವುದನ್ನೇ ಆಸಕ್ತಿಯಿಂದ ನೋಡುತ್ತಿದ್ದ ಶ್ರೀಕಂಠ ಶಾಸ್ತ್ರಿಯಲ್ಲಿ ಸುಪ್ತವಾಗಿದ್ದ ಚಿತ್ರಕಲಾಸಕ್ತಿ ಮೊಳಕೆಯೊಡೆಯಿತು. ತದೇಕ ಚಿತ್ತದಿಂದ ಚಿತ್ರ ರಚಿಸತೊಡಗಿದ. ರಾಮಕೃಷ್ಣರಾಯರು ಈ ಚಿತ್ರಗಳನ್ನು ಕಂಡು ಸಂತೋಷಪಟ್ಟರು. ಅಭಿಮಾನಪಟ್ಟರು. ಕ್ರಮವಾದ ಶಿಕ್ಷಣವೇ ಇಲ್ಲದೆ ಇಂತಹ ಚಿತ್ರಗಳನ್ನು ರಚಿಸುವ ಈ ಬಾಲಕ ಅಭಿಜಾತ ಕಲಾವಿದ, ಭರವಸೆ ಮೂಡಿಸುವ ಈ ಬಾಲಕನಿಗೆ ಕ್ರಮ ಶಿಕ್ಷಣ ದೊರೆತರೆ ಈ ಬಾಲಕ ಮುಂದೆ ದೊಡ್ಡ ಚಿತ್ರಕಲಾವಿದನಾಗಬಹುದೆಂಬ ಕಲ್ಪನೆ ಅವರಲ್ಲಿ ಬಂತು. ಅಂದಿನಿಂದಲೇ ರಾಮಕೃಷ್ಣರಾಯರಿಂದ ಕಲಾಶಿಕ್ಷಣ ಪ್ರಾರಂಭವಾಯಿತು. ಶಿಕ್ಷಣ ಒಂದು ಹಂತ ತಲುಪಿದ ಮೇಲೆ ಮದ್ರಾಸಿನ ಲೋವರ್ ಆರ್ಟ್ ಪರೀಕ್ಷೆಗೆ ಕೂರಿಸಿದರು. ಅವರ ನಿರೀಕ್ಷೆಯಂತೆಯೇ ಹುಡುಗ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದ. ಮೈಸೂರಿನಲ್ಲಿ ಪ್ರೌಢ ಕಲಾ ಶಿಕ್ಷಣ ಮುಂದುವರೆಸಲು ರಾಮಕೃಷ್ಣರಾಯರು ಬಾಲಕನನ್ನು ಪ್ರೋತ್ಸಾಹಿಸಿದರು.

ಇದಾದ ನಂತರ ಒಮ್ಮೆ ಬಾಲಕ ಶ್ರೀಕಂಠ ಶಾಸ್ತ್ರಿ ತಂದೆಯವರೊಡನೆ ಶೃಂಗೇರಿಗೆ ಹೋಗಿದ್ದ. ಅಲ್ಲಿನ ತುಂಗಾನದಿ ದಡದ ಮೇಲಿರುವ ವಿದ್ಯಾಶಂಕರ ದೇವಾಲಯದ ಪೆನ್ಸಿಲ್ ಸ್ಕೆಚ್ ಮಾಡಿ ಆಗಿನ ಜಗದ್ಗುರು ಶ್ರೀ ಚಂದ್ರಶೇಕರ ಭಾರತಿ ಸ್ವಾಮಿಗಳಿಗೆ ತೋರಿಸಿದ. ಬಾಲಕನ ಕಲಾ ಪ್ರತಿಭೆಯನ್ನು ಗಮನಿಸಿದ ಗುರುಗಳು "ನೀನು ಚಿತ್ರ ಕಲೆಯನ್ನೇ ಚೆನ್ನಾಗಿ ಅಭ್ಯಾಸ ಮಾಡು. ಉತ್ತಮ ಕಲಾವಿದನಾಗಿ ಕೀರ್ತಿವಂತನಾಗುವೆ" ಎಂದು ಆಶೀರ್ವದಿಸಿದರು. ಶ್ರೀಗಳ ಆ ಆಶೀರ್ವಾದದಿಂದ ಪುಳಕಗೊಂಡ ಬಾಲಕ ಆನಂದ ಸಾಗರದಲ್ಲಿ ತೇಲಿಹೋದ. ಈ ವಿಷಯ ಬಾಲಕನ ತೀರ್ಥರೂಪರಿಗೂ ಗೊತ್ತಾಯಿತು.

ಆಗ್ಯೆ ಶ್ರೀಕಂಠ ಶಾಸ್ತ್ರಿಯ ಅತ್ತಿಗೆಯ ತಮ್ಮ ಎಸ್.ವಿ. ಸೀತಾರಾಮ ರಾವ್ ಎಂಬ ಓರಗೆಯ ಹುಡುಗ ಆಗಲೇ ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯಲ್ಲಿ ಮೊದಲನೆಯ ವರ್ಷದ ಚಿತ್ರಕಲಾ ಶಿಕ್ಷಣಕ್ಕೆ ನೋಂದಾಯಿಸಿಕೊಂಡಿದ್ದ. ಅವನು ಶಿವಮೊಗ್ಗೆಗೆ ಬಂದಾಗ, ಅಲ್ಲಿನ ಚಿತ್ರಕಲಾ ಶಿಕ್ಷಣದ ಬಗೆಗೆ ಸುಂದರ ಚಿತ್ರಗಳನ್ನು ಈ ಬಾಲಕನ

ಮನಸ್ಸಿನಲ್ಲಿ ಮೂಡಿಸಿ, ಅಲ್ಲಿ ಕಲಾಶಿಕ್ಷಣ ಪಡೆಯಬೇಕೆನ್ನುವ ಆಸೆಯನ್ನು ಚಿಗುರಿಸಿದ್ದ. ಈ ಪ್ರೋತ್ಸಾಹ ಒತ್ತಾಸೆಗಳ ಫಲವಾಗಿ ಬಾಲಕ ತಂದೆಯವರೊಂದಿಗೆ ವಿಶೇಷ ಕಲಾ ಶಿಕ್ಷಣಕ್ಕಾಗಿ ಮೈಸೂರಿಗೆ ತೆರಳಿ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯಲ್ಲಿ ಚಿತ್ರಕಲಾಭ್ಯಾಸ ಮುಂದುವರೆಸುವ ಮಾತೆತ್ತಿದ. ಶ್ರೀಕಂಠ ಶಾಸ್ತ್ರಿಯ ಈ ಹೆಬ್ಬಯಕೆಗೆ ವಿರೋಧ ಬಂದುದು ತಂದೆಯವರಿಂದಲ್ಲ, ಬದಲಾಗಿ ಚಿಕ್ಕಪ್ಪಂದಿರಿಂದ ಹಾಗೂ ಅಣ್ಣಂದಿರಿಂದ. ಅವರಿಗೆ ಇಷ್ಟವಿದ್ದುದು ಬಾಲಕ ಶೃಂಗೇರಿಯ ಮಠದಲ್ಲಿ ಸಂಸ್ಕೃತವನ್ನು ಕಲಿತು, ತಮ್ಮ ಹಿರಿಯರಂತೆ ಪಂಡಿತೋತ್ತಮನಾಗಲಿ ಎಂಬುದು. ಆದರೆ ಸಂಸ್ಕೃತ, ವೇದ ಕಲಿಯಲು ಈ ಬಾಲಕನಲ್ಲಿ ಪ್ರತಿರೋಧವಿತ್ತು. ಅದರೊಂದಿಗೇ ಕರ್ನಾಟಕಕ್ಕೆ ಒಬ್ಬ ಉತ್ತಮ ಚಿತ್ರ ಕಲಾವಿದನ ಕೊಡುಗೆ ಈ ಮನೆತನದಿಂದ ಬೇಕಾಗಿತ್ತು. ತನ್ನ ಕಲಾ ಶಿಕ್ಷಣದ ಬಗೆಗೆ ತನ್ನ ಗುರಿ ದಾರಿಗಳನ್ನು ಸ್ಪಷ್ಟಪಡಿಸಿಕೊಂಡಿದ್ದ ಈ ಛಲವಾದಿ ಬಾಲಕ ತನ್ನ ನಿರ್ಧಾರದಿಂದ ವಿಮುಖನಾಗುವಂತಿರಲಿಲ್ಲ.

## ಕಲಾವಿದನಾಗಲು ಸಂಕಲ್ಪ

೧೯೩೩ರಲ್ಲಿ ತನ್ನ ೧೫ನೆಯ ವಯಸ್ಸಿನಲ್ಲಿ ಮೈಸೂರಿನಲ್ಲಿ ಚಿತ್ರಕಲಾ ಶಿಕ್ಷಣ ಪಡೆಯುವ ದೃಢ ಸಂಕಲ್ಪದಿಂದ ಬಾಲಕ ಶ್ರೀಕಂಠ ಶಾಸ್ತ್ರಿ ಮನೆಯವರ ವಿರೋಧದ ಮಧ್ಯೆಯೂ ಹೊರಟು ನಿಂತು ಮೈಸೂರು ರೈಲು ಹತ್ತಿದ್ದ. ಆಗ ಆತನ ಜೇಬಿನಲ್ಲಿದ್ದುದು ಕೇವಲ ಏಳು ರೂಪಾಯಿಗಳು. ವಿಷಯ ತಿಳಿದ ಚಿಕ್ಕಪ್ಪ ಅಣ್ಣಂದಿರು ಓಡೋಡಿ ಬಂದು ರೈಲ್ವೆ ಪ್ಲಾಟ್ ಫಾರಂನಲ್ಲಿ ಆಗಲೇ ರೈಲಿನಲ್ಲಿ ಕುಳಿತಿದ್ದ ಶ್ರೀಕಂಠ ಶಾಸ್ತ್ರಿಯನ್ನು ಕಂಡು "ಇಳಿದು ಮನೆಗೆ ಬಾ" ಎಂದರು. ಬಾಲಕ ನಿರಾಕರಿಸಿದ. ಹಿರಿಯರಿಂದ ಕಪಾಳ ಮೋಕ್ಷವಾಯಿತು. "ಹಠಮಾರಿ", "ಒರಟ" ಎಂಬ ಬೈಗಳೂ ಹಿಂಬಾಲಿಸಿದುವು. ಚಿಕ್ಕ ವಯಸ್ಸಿನ ಹುಡುಗ ಒಂಟಿಯಾಗಿ ದೊಡ್ಡಪಟ್ಟಣಕ್ಕೆ ಹೋಗುತ್ತಿದ್ದಾನೆ. ಅಲ್ಲಿ ಏನೇನು ಕಷ್ಟ ಪಡುವನೋ ಎಂಬ ಆತಂಕ ಆ ಹಿರಿಯರಿಗೆ. ಅವರಿಗೂ ಹೊಡೆದದ್ದು ಕೆಡುಕೆನಿಸಿರಬೇಕು. ರೈಲು ನಿಧಾನವಾಗಿ ಚಲಿಸಲಾರಂಭಿಸಿತು. ಅಣ್ಣ ಸೀತಾರಾಮ ಶಾಸ್ತ್ರಿ ಮಾರನೇ ದಿನವೇ ಲಾ ಪರೀಕ್ಷೆ ಬರೆಯಲು ಪೂನಾಕ್ಕೆ ಹೋಗಬೇಕಾಗಿತ್ತು. ಅಲ್ಲಿನ ಪ್ರಯಾಣಕ್ಕೆಂದು ಮನೆಯವರು ಕೊಟ್ಟಿದ್ದ ಹಣದಲ್ಲಿಯೇ ೨೫ ರೂಪಾಯಿಗಳನ್ನು ಶ್ರೀಕಂಠ ಶಾಸ್ತ್ರಿಯ ಜೇಬಿಗೆ ತುರುಕಿದ್ದರು. ಅಣ್ಣ ತನ್ನ ಪೂನಾ ಪ್ರವಾಸಕ್ಕೆಂದು ಇಟ್ಟುಕೊಂಡಿದ್ದ ಹಣ ಇದೆಂದರಿತ ಬಾಲಕ ಶ್ರೀಕಂಠ ಶಾಸ್ತ್ರಿ ಅಣ್ಣನಿಗೆ ತೊಂದರೆಯಾಗಬಾರದೆಂದು ಜೇಬಿನಿಂದ ಆ ಇಪ್ಪತ್ತೈದು ರೂಪಾಯಿಗಳನ್ನು ತೆಗೆದು ಪ್ಲಾಟ್ ಫಾರಂ ಮೇಲೆ ಎಸೆದ. ರೈಲು ಮೈಸೂರು ತಲುಪಿತು. ಮೈಸೂರಿನಲ್ಲಿಳಿದು ಸ್ನೇಹಿತ ಬಂಧು ಎಸ್.ವಿ. ಸೀತಾರಾಮರಾಯನನ್ನು ಕಂಡು ತನ್ನ ಸಂಕಲ್ಪ ತಿಳಿಸಿದ. ಉಳಿಯಲು ಸ್ಥಳ ಊಟದ ವ್ಯವಸ್ಥೆ ಮಾಡಿಕೊಳ್ಳಬೇಕಾಗಿತ್ತು.

## ಚಾಮರಾಜೇಂದ್ರ ಕಲಾಶಾಲೆಯಲ್ಲಿ

ಅಷ್ಟರಲ್ಲಿ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಗೆ ಸೇರ್ಪಡೆಯಾಗಲು ಹೋದಾಗ,

ಸೇರ್ಪಡೆಗೆ ಮುಂಚಿನ ಪರೀಕ್ಷೆ (ಟೆಸ್ಟ್) ಕೊಟ್ಟರು. ಒಂದು ದೊಡ್ಡ ಹಾಲಿನಲ್ಲಿ ಕುಳ್ಳಿರಿಸಿ ಕಾಗದದ ಮೇಲೆ ಚಿತ್ರ ಬಿಡಿಸಿ ಬಣ್ಣ ಲೇಪಿಸಲು ಹೇಳಿದರು. ಈ ಬಾಲಕನು ತನ್ನೊಂದಿಗೊಯ್ದಿದ್ದ ಬಣ್ಣಗಳಾದರೂ ಕೆಲವು ಮಾತ್ರಾ. ಅವು ಸಾಲದಾದಾಗ, ಪಕ್ಕದ ಕ್ಲಾಸ್ ರೂಮಿನ ಹಿರಿಯ ವಿದ್ಯಾರ್ಥಿಗಳು ಬಣ್ಣಗಳನ್ನು ಕೊಟ್ಟು ಚಿತ್ರ ಪೂರೈಸಲು ನೆರವಾದರು.

ಆಗ ಆ ಕಲಾ ಶಿಕ್ಷಣ ಶಾಲೆಗೆ ಶ್ರೀರಾಮಸ್ವಾಮಿ ಐಯ್ಯಂಗಾರರೆನ್ನುವವರು ಅಧೀಕ್ಷಕರು (ಸೂಪರಿನ್‌ಟೆಂಡೆಂಟರು), ಶ್ರೀ ಎನ್.ಜಿ. ಪಾವಂಜೆಯವರು ಸಹಾಯಕ ಅಧೀಕ್ಷಕರು (ಅಸಿಸ್ಟೆಂಟ್ ಸೂಪರಿನ್‌ಟೆಂಡೆಂಟರು). ಇವರಲ್ಲದೆ ಕೇಶವಯ್ಯ, ಟಂಕಸಾಲೆ, ವೇಣುಗೋಪಾಲನಾಯ್ಡು ಮುಂತಾದವರು ಅಧ್ಯಾಪಕರಾಗಿದ್ದರು. ಶ್ರೀಮಾನ್ ಪಾವಂಜೆಯವರು ಟೆಸ್ಟ್‌ನಲ್ಲಿ ಈ ಬಾಲಕ ರಚಿಸಿದ್ದ ಚಿತ್ರವನ್ನೂ, ಈತನ ಕಲೆಯ ಮಟ್ಟವನ್ನೂ ಕಂಡು ಅತ್ಯಂತ ಸಂತಸಪಟ್ಟರು. ಬೆನ್ನು ತಟ್ಟಿದರು. ಮೊದಲನೆಯ ತರಗತಿಗೆ ಸೇರಬೇಕಾಗಿದ್ದ ಈ ವಿದ್ಯಾರ್ಥಿಯನ್ನು ನೇರವಾಗಿ ನಾಲ್ಕನೆಯ ತರಗತಿಗೇ ಸೇರಿಸಿಕೊಳ್ಳಬಹುದೆಂದು ಶಿಫಾರ್ಸು ಮಾಡಿದರು. ನಂತರ ಮೈಸೂರಿಗೆ ಬಂದ ಹಿನ್ನೆಲೆ, ಇಲ್ಲಿನ ವಾಸ್ತವ್ಯದ ಅನಾನುಕೂಲಗಳು, ಆರ್ಥಿಕ ಪರಿಸ್ಥಿತಿ ಇವನ್ನೆಲ್ಲಾ ವಿಚಾರಿಸಿದರು. ಮುಂದೆ ಬರಬೇಕಾದ ಈ ಕಲಾಪುಷ್ಪ ಕಮರಿ ಹೋಗಬಾರದೆಂದು ವಿದ್ಯಾರ್ಥಿವೇತನ (ಸ್ಕಾಲರ್‌ಷಿಪ್) ಕೊಡಿಸಿ ಕೊಡುವುದಾಗಿ ಭರವಸೆಯನ್ನೂ ನೀಡಿದರು. ಧ್ಯೇಯಗಳಿಗೆ ಹೆಚ್ಚು ಬೆಲೆ ಇದ್ದ ಆ ಕಾಲದಲ್ಲಿ ತಪಸ್ಸಿಗೆ, ಸಾಧನೆಗೆ ಉನ್ನತ ಸ್ಥಾನವಿತ್ತು. ಪ್ರತಿಭೆ ಎಲ್ಲಿಯೇ ಇರಲಿ ಗುರುತಿಸಿ ಮುಂದೆ ತರುವ ವಿಶಾಲ ಮನೋಭಾವದ ಪಾವಂಜೆಯವರಂತಹ ಕಲಾಗುರುಗಳು ಇದ್ದುದರಿಂದಲೇ ಕರ್ನಾಟಕ ಕುಕ್ಕೆಯವರಂತಹ ಅನೇಕ ಮಂದಿ ಕಲಾವಿದರನ್ನು ಪಡೆದುಕೊಂಡಿತು.

ಮೊದಲ ಮೂರುದಿನಗಳು ಅನಾಥಾಲಯದಲ್ಲಿದ್ದು ಅನಂತರ ಕೆಲವು ದಿನ ಅರಮನೆಯ ಛತ್ರದಲ್ಲಿ ತಂಗಿದ್ದು ನಂತರ ಹಳೇ ಅಗ್ರಹಾರದ ಉಡುಪಿ ನಾರಾಯಣಾಚಾರ್ಯರ ಹೋಟೆಲಿನಲ್ಲಿ ವಿದ್ಯಾರ್ಥಿವೇತನ ಸಿಗುವ ಭರವಸೆಯಿಂದ ಉಳಿದುಕೊಂಡರು. ಆದರೆ ವಿದ್ಯಾರ್ಥಿ ವೇತನವಾಗಿ ಬಂದಿದ್ದು ತಿಂಗಳಿಗೆ ಹನ್ನೆರಡು ರೂಪಾಯಿ. ಇದರಿಂದ ಹೋಟೆಲ್ ಬಾಡಿಗೆ, ಊಟದ ಖರ್ಚು ನಡೆದೀತೇ!

ಸ್ಕಾಲರ್‌ಷಿಪ್ ಹಣ ಊಟ, ವಸತಿಗಳಿಗೇ ಸಾಲದಾದರೆ ಬಣ್ಣ ಬ್ರಷ್ ಕೊಂಡು ಕಲಾಭ್ಯಾಸ ಮಾಡುವುದಾದರೂ ಹೇಗೆ? ಅಧ್ಯಾಪಕ ಕೇಶವಯ್ಯನವರು ಈ ಬಾಲಕನ ಕಷ್ಟವನ್ನು ಗಮನಿಸಿದರು. "ನಾನು ಸ್ವಂತಕ್ಕೆ ಚಿತ್ರಗಳನ್ನು ರಚಿಸಿಕೊಳ್ಳುವಾಗ ನನಗೆ ಸಹಾಯಕನಾಗಿ ಕೆಲಸ ಮಾಡು, ದಿನಕ್ಕೆ ಹನ್ನೆರಡಾಣೆ ಪ್ರಕಾರ ಮಜೂರಿ ಕೊಡುತ್ತೇನೆ" ಎಂದರು. ಶ್ರೀಕಂಠ ಶಾಸ್ತ್ರಿಯ ಸಂತೋಷಕ್ಕೆ ಪಾರವೇ ಇಲ್ಲ. ಸಮರ್ಪಕವಾಗಿ ಅವರ ನಿರೀಕ್ಷೆಯಂತೆ ಅವರ ಕಲಾ ನಿರ್ಮಾಣಕ್ಕೆ ಸಹಾಯಕನಾದಾಗ ಮಜೂರಿ ಹಣದ ಜೊತೆಗೆ ಬ್ರಷ್, ಬಣ್ಣ ಎಲ್ಲವನ್ನೂ ಅವರೇ ಕೊಟ್ಟರು. ಕಡೆಗೆ ಬಾಡಿಗೆ ರೂಮು ಹಿಡಿದು ವರ್ಷವಿಡೀ ಭಿಕ್ಷಾನ್ನದಲ್ಲಿ ಕಳೆದರು.

## ಪ್ರತಿಭಾನ್ವಿತ ಕಲಾವಿದ್ಯಾರ್ಥಿ

ನಾಲ್ಕನೆಯ ತರಗತಿ ಮುಗಿಸಿ ಐದನೇ ತರಗತಿಗೆ ಬಂದಾಗ ಶಾಲೆಯಲ್ಲಿ ಎನ್.ಎಸ್. ಸುಬ್ಬುಕೃಷ್ಣ ಮತ್ತು ಬಿ.ಹೆಚ್. ರಾಮಚಂದ್ರ ಇವರು ಸಹಪಾಠಿಗಳಾಗಿದ್ದರು. ಈ ಮೂರು ಮಂದಿ ಶಿಷ್ಯರನ್ನು ಕಂಡರೆ ಕಲಾಗುರು ಪಾವಂಜೆಯವರಿಗೆ ಒಂದು ಬಗೆಯ ಅಭಿಮಾನ. ಗುರುಗಳ ಉತ್ತಮ ಶಿಕ್ಷಣ ಮತ್ತು ಮಾರ್ಗದರ್ಶನದಿಂದ ಕಲಾ ಶಾಲೆಯ ಅಭ್ಯಾಸದಲ್ಲಿ ಮುಂಚೂಣಿಯಲ್ಲಿದ್ದ ಇವರು ಅಣ್ಣ ತಮ್ಮಂದಿರಂತೆ ಅನ್ಯೋನ್ಯವಾಗಿರುತ್ತಿದ್ದರು. ಸೂಪರಿಂಟೆಂಡೆಂಟ್ ರಾಮಸ್ವಾಮಿ ಅಯ್ಯಂಗಾರರಿಗೆ ಶಿಷ್ಯ ಶ್ರೀಕಂಠ ಶಾಸ್ತ್ರಿಯಲ್ಲಿ ವಿಶೇಷ ಆದರ. ಅವರು ಈ ವಿದ್ಯಾರ್ಥಿಯನ್ನು ಒಮ್ಮೆ ಕರೆದು ಮದ್ರಾಸಿನ ಹೈಯರ್ ಕಲಾಪರೀಕ್ಷೆಗೆ ಕುಳಿತುಕೋ ಎಂದರಲ್ಲದೆ ಹುಡುಗನ ಸ್ಥಿತಿ ಅರಿತು ತಾವೇ ಫೀಜು ಕಟ್ಟಿದರು.

ಮದ್ರಾಸಿನ ಹೈಯರ್ ಕಲಾ ಪರೀಕ್ಷೆಯ ಫಲಿತಾಂಶ ಬಂತು. ನಿರೀಕ್ಷಿಸಿದ್ದಂತೆಯೇ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದ ಶ್ರೀಕಂಠ ಶಾಸ್ತ್ರಿ, ಸೂಪರಿಟೆಂಡೆಂಟರಿಗೆ ಈ ವಿಷಯ ಗೊತ್ತಾಗಿ ತುಂಬಾ ಸಂತಸಪಟ್ಟು ಶಿಷ್ಯನನ್ನು ಮೆಚ್ಚಿಕೊಂಡರು. ಈ ವೇಳೆಗೆ ಮೈಸೂರು ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯ ಐದು ವರ್ಷಗಳ ಡಿಪ್ಲೊಮಾ ಶಿಕ್ಷಣ ಪೂರೈಸಿತ್ತು. ಉತ್ತಮ ದರ್ಜೆಯಲ್ಲಿ ತೇರ್ಗಡೆಯೂ ಆಗಿ ಶ್ರೀಕಂಠ ಶಾಸ್ತ್ರಿ ಪೂರ್ಣ ಪ್ರಮಾಣದ ಕಲಾವಿದನಾಗಿ ಹೊರಪ್ರಪಂಚಕ್ಕೆ ಕಾಲಿಟ್ಟ. ಆಗ ಮುಂದೇನು ಮಾಡಬೇಕೆಂಬ ಪ್ರಶ್ನೆ ಎದುರಾಯಿತು!

## ಕಲಾವಿದನಾಗಿ

ಶಿವಮೊಗ್ಗಕ್ಕೆ ಹಿಂತಿರುಗಿ ಆ ನಂತರದ ಕೆಲವು ವರ್ಷ ಅಲ್ಲಿ ಇಷ್ಟಪಟ್ಟವರಿಗೆ ಚಿತ್ರಕಲಾ ಶಿಕ್ಷಣದೊಂದಿಗೆ ಅಂಗಸಾಧನೆಯನ್ನೂ ಹೇಳಿಕೊಡುತ್ತಿದ್ದರು. ಉತ್ತಮ ದೇಹ ಸಂಪತ್ತನ್ನು ಹೊಂದಿದ್ದ ಕುಕ್ಕೆಯವರಿಗೆ ಜಿಲ್ಲಾ ಆರೋಗ್ಯ ಇಲಾಖೆ ವಿಶೇಷ ಸಮಾರಂಭದಲ್ಲಿ "ಮಲ್ನಾಡ್ ಬೆಸ್ಟ್" ಎಂಬ ಅಭಿದಾನವನ್ನೂ ಕೊಟ್ಟಿತು.

ಅಷ್ಟರಲ್ಲಿ ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯಿಂದ "ಕ್ರಾಫ್ಟ್‌ಮನ್" ಕೆಲಸದ ಆದೇಶ ಬಂತು. ಅಲ್ಲಿ ಯು.ಜಿ. ಎಕ್ಸ್‌ಹೆನರ್ ಎಂಬ ವಿನ್ಯಾಸಕಾರರ ಬಳಿ ಸಹಾಯಕರಾಗಿ ಮಾಡುವ ಕೆಲಸ ಅದು. ಆ ಕೆಲಸ ಕುಕ್ಕೆಯವರಿಗೆ ಅಷ್ಟಾಗಿ ಹಿಡಿಸಲಿಲ್ಲ. ಒಮ್ಮೆ ಆಗಿನ ಮೈಸೂರು ಸಂಸ್ಥಾನದ ಕೈಗಾರಿಕಾ ಇಲಾಖೆಯ ಡೈರೆಕ್ಟರ್ ಶ್ರೀ ಎಸ್.ಜಿ. ಶಾಸ್ತ್ರಿ ಎನ್ನುವವರು ಈ ಶಾಲೆಯ ತಪಾಸಣೆಗಾಗಿ ಬಂದರು. ಆಗ ಕುಕ್ಕೆಯವರು ನೇರವಾಗಿ ಶಾಸ್ತ್ರಿಗಳ ಬಳಿ ಹೋಗಿ ನನಗೆ ಈ ಕೆಲಸ ಹಿಡಿಸಲಿಲ್ಲ, ನಿಮ್ಮ ಸಂಸ್ಥೆಯ ಕಲಾವಿಭಾಗದಲ್ಲಿ ಶಿಕ್ಷಕನ ಹುದ್ದೆ ಕೊಡಿ ಎಂದು ಕೇಳಿದರು. ಆಗ ಶಾಸ್ತ್ರಿಗಳು "ಮೀಸೆ ಬಾರದ ಹುಡುಗ ಅನುಭವಿಗಳ ನಡುವೆ ಕಲಾ ಶಿಕ್ಷಕನಾಗಬೇಕೇ ?" ಎಂದು ಹಂಗಿಸಿದರು. ಸ್ವಾಭಿಮಾನಿಗಳಾದ ಕುಕ್ಕೆ "ಮೀಸೆಯಲ್ಲ ಕೆಲಸ ಮಾಡುವುದು, ಕೈ" ಎಂದು ಹೇಳಿ ಆ ಕೆಲಸ ಬಿಟ್ಟರು. ಆ ನಂತರ ಕಲಾಗುರು ಕೇಶವಯ್ಯನವರೊಂದಿಗೆ ಅರಮನೆಯಲ್ಲಿ ದಸರಾ ಪ್ಯಾನಲ್ ಕೆಲಸ ಪ್ರಾರಂಭಿಸಿದರು. ಆಗೊಮ್ಮೆ ಸಂಜೆ ಸಮಯದಲ್ಲಿ ಫುಟ್‌ಬಾಲ್ ಆಟ ಆಡುವಾಗ ಮಂಡಿ ಚಿಪ್ಪಿಗೆ ಏಟು ಬಿದ್ದು ಅದು ಜಾರಿದಾಗ ಮೈಸೂರು ಬಿಟ್ಟು ಶಿವಮೊಗ್ಗೆಗೆ ಬಂದು ಮೂರು ತಿಂಗಳು ವಿಶ್ರಾಂತಿ ಪಡೆಯಬೇಕಾಯಿತು.

ಆಗ್ಯೆ ವಕೀಲರಾಗಿದ್ದ ಅಣ್ಣ ಸೀತಾರಾಮ ಶಾಸ್ತ್ರಿಗಳು ಈ ತಮ್ಮನ ವ್ಯವಸ್ಥಿತ ವೃತ್ತಿ ಜೀವನಕ್ಕೆ ಏರ್ಪಾಟು ಮಾಡಬೇಕೆಂದಾಲೋಚಿಸಿ ಒಂದು ಫುಲ್ ಸೈಜಿನ ಕ್ಯಾಮರಾ ಕೊಡಿಸಿದರು. "ಫೋಟೋ ಸ್ಟುಡಿಯೋ ಪ್ರಾರಂಭಿಸು, ಅದರೊಂದಿಗೆ ನಿನ್ನ ಚಿತ್ರಕಲೆಯನ್ನೂ ಅಭಿವೃದ್ಧಿಪಡಿಸಿಕೊಳ್ಳಬಹುದು" ಎಂಬ ಸಲಹೆ ಕೊಟ್ಟರು. ಒಬ್ಬ ಪಾಲುದಾರರೊಂದಿಗೆ ಪ್ರಾರಂಭಿಸಿದ ಸ್ಟುಡಿಯೋ ಲಾಭ ತರಲೇ ಇಲ್ಲ. ನಂತರ ಪಾಲುದಾರಿಕೆಯಿಂದ ಪಾರಾಗಿ ಸ್ವಂತವಾಗಿ ನೋಡಿಕೊಂಡಾಗಲೂ ಕೆಲಸ ಇರುತ್ತಿದ್ದರೂ ಆದಾಯ ಅದೇ ಪ್ರಮಾಣದಲ್ಲಿ ಬರಲಿಲ್ಲ. ಹಾಗಾಗಿ ನಿರ್ವಾಹವಿಲ್ಲದೆ ಸ್ಟುಡಿಯೋ ಮುಚ್ಚಬೇಕಾಯಿತು.

## ವಿವಾಹ

ಅಷ್ಟರಲ್ಲಿ ತೀರ್ಥರೂಪರು ಮತ್ತು ಮಮತಾಮಯಿ ತಾಯಿ, ಮತ್ತು ಎರಡನೇ ತಾಯಿಯಂತಿದ್ದ ಚಿಕ್ಕಮ್ಮ ಇವರೆಲ್ಲಾ ತೀರಿಕೊಂಡರು. ಇವರಿಗೆ ಕುಕ್ಕೆಯವರು ವಿವಾಹವಾಗಿ ಜೀವನದಲ್ಲಿ ಒಂದು ನೆಲೆಗೆ ಬಂದು ನಿಲ್ಲುವುದನ್ನು ನೋಡುವ ಆಸೆ ಇತ್ತು. ಆದರೆ ಸರ್ಕಾರಿ ಕೆಲಸವಾಗಲಿ, ಬೇರೆ ಉದ್ಯೋಗವಾಗಲಿ, ನಿಗದಿತ ವರಮಾನವಾಗಲಿ ಇಲ್ಲದ ಈ ಯುವಕನಿಗೆ ಹೆಣ್ಣು ಕೊಡಲು ಯಾರೂ ಮುಂದೆ ಬರಲಿಲ್ಲ. ಕೊನೆಗೆ ಅವರ ೨೮ನೆಯ ವಯಸ್ಸಿನಲ್ಲಿ ಅವರ ಚಿಕ್ಕಪ್ಪನವರು ಸಾಗರದಲ್ಲಿ ಫಾರೆಸ್ಟ್ ಆಫೀಸರಾಗಿದ್ದ ನರಸಿಂಹಯ್ಯನವರ ಮೊದಲನೆಯ ಮಗಳು ರಾಜಮ್ಮ ಎಂಬ ಕನ್ಯೆಯೊಂದಿಗೆ ವಿವಾಹ ಗೊತ್ತು ಮಾಡಿದರು. ಮದುವೆ ಸಾಗರದಲ್ಲಿಯೇ ನಡೆಯಿತು. ಮದುವೆ ನಡೆದ ಕೆಲವು ದಿನಗಳಲ್ಲಿಯೇ ಕುಕ್ಕೆಯವರ ಮಾವ ನರಸಿಂಹಯ್ಯನವರಿಗೆ ಬೆಂಗಳೂರಿಗೆ ವರ್ಗವಾಯಿತು. ಅವರೊಂದಿಗೆ ಬೆಂಗಳೂರಿಗೇ ಹೋಗಿ ಜೀವನಕ್ಕೆ ಒಂದು ನೆಲೆ ಕಲ್ಪಿಸಿ ಕೊಳ್ಳುವುದು ಒಳ್ಳೆಯದು. ದೊಡ್ಡ ಪಟ್ಟಣ. ನಿನ್ನ ಕಲಾನೈಪುಣ್ಯದ ಸಾರ್ಥಕತೆಗೆ ಅನುವಾಗಬಹುದೆಂಬ ಸಲಹೆ ಮನೆಯವರಿಂದ ಬಂತು. ಅವರೊಂದಿಗೆ ಚಿಕ್ಕಪ್ಪನ ಮಕ್ಕಳು ರಾಮು ಮತ್ತು ರಾಜು ಇವರೂ ಬೆಂಗಳೂರಿಗೆ ಬಂದರು.

## ಬೆಂಗಳೂರಿನಲ್ಲಿ ನೆಲೆ

ಬೆಂಗಳೂರಿನಲ್ಲಿ ಮಾವನ ಮನೆಗೆ ಸಮೀಪದಲ್ಲೊಂದು ರೂಂ ಮಾಡಿಕೊಂಡು ಚಿಕ್ಕಪೇಟೆಯಲ್ಲಿ "ಕುಕ್ಕೆಬ್ರದರ್ಸ್" ಎಂಬ ಹೆಸರಿನಲ್ಲಿ ಫೋಟೋ ಸ್ಟುಡಿಯೋ ಒಂದನ್ನು ತೆರೆದರು. ಅದೇ ಅವರ ಚಿತ್ರಕಲಾ ಸ್ಟುಡಿಯೋ ಸಹ ಆಗಿತ್ತು. ವಾಣಿಜ್ಯ ಕಲಾವಿದರಾಗಿ ವೃತ್ತಿ ಜೀವನ ಆರಂಭಿಸಿದ ಅವರಿಗೆ ಬೆಂಗಳೂರಿನ ಅನೇಕ ಪ್ರಮುಖರ ಪರಿಚಯವಾಯಿತು. ಆಗ ನಗರದಲ್ಲಿ ವಾಣಿಜ್ಯ ಕಲಾವಿದರು ಬೆರಳೆಣಿಸುವಷ್ಟು ಮಂದಿ ಮಾತ್ರ ಇದ್ದರು. ಒಂದಾದ ಮೇಲೊಂದು ಕೆಲಸಗಳು ಕೈಗೆ ಸಿಕ್ಕಿ ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸತೊಡಗಿತು. ಆದರೂ ಸ್ವತಂತ್ರ ಜೀವನವನ್ನು ಕಲಾವಿದರಾಗಿಯೇ ನಡೆಸಲು ಅವರು ಸುಮಾರು ಮೂರು ವರ್ಷಗಳ ಕಾಲ ಹೆಣಗಬೇಕಾಯಿತು. ಅನಂತರವೇ ಬೇರೆ ಮನೆ ಮಾಡಿ ಹೆಂಡತಿ ಮತ್ತು ಮಗುವನ್ನು ಕರೆಸಿಕೊಂಡು ವಾಸ್ತವ್ಯ ಹೂಡಿದರು.

## ಬಹುಮುಖ ಪ್ರತಿಭೆ

ಆಗ ಚಲನಚಿತ್ರ ಕ್ಷೇತ್ರದಲ್ಲಿ ಹೆಸರಾಂತ ನಟರೂ ಸಂಗೀತಗಾರರೂ ಆಗಿದ್ದ ಶ್ರೀ ಹೊನ್ನಪ್ಪ ಭಾಗವತರು ಮತ್ತು ನಿರ್ದೇಶಕ ಶ್ರೀ ಕು.ರಾ. ಸೀತಾರಾಮಶಾಸ್ತ್ರಿಗಳ ಸಂಪರ್ಕಕ್ಕೆ ಕುಕ್ಕೆಯವರು ಬಂದರು. ಹೊನ್ನಪ್ಪ ಭಾಗವತರು ತೆಗೆಯುತ್ತಿದ್ದ 'ಮಹಾಕವಿ ಕಾಳಿದಾಸ' ಚಲನಚಿತ್ರದ ಕಲಾ ನಿರ್ದೇಶಕರಾಗಲು ಆಹ್ವಾನ ಬಂತು. ಯಶಸ್ವಿಯಾಗಿ ಆ ಕಾರ್ಯ ನಿರ್ವಹಿಸಿದ್ದು ಚಿತ್ರ ಹೆಸರು ಗಳಿಸಿತು. ನಂತರ ಕು.ರಾ. ಸೀತಾರಾಮ ಶಾಸ್ತ್ರಿಗಳ 'ಕೈವಾರ ಮಹಾತ್ಮೆ' ಚಿತ್ರದ ಕಲಾನಿರ್ದೇಶಕರಾಗಿಯೂ ದುಡಿದರು.

ಕಲಾ ಮಾಧ್ಯಮದ ವಿವಿಧ ತಂತ್ರಗಳು ಇವರಿಗೆ ಒಲಿದಿತ್ತು. ಬ್ರಷ್‌ನಿಂದಲೇ ಅಲ್ಲದೇ ಬ್ಲೇಡಿನಿಂದ, ದಾರದಿಂದ ವರ್ಣಲೇಪ ಮಾಡುವುದು ಕಾಲ್ಬೆರಳಿಂದ, ಒಂದೇ ಕೈನಿಂದ, ಕೆಲವು ಸಲ ಎರಡೂ ಕೈಗಳಿಂದ ಚಿತ್ರ ರಚಿಸುವುದು. ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಚಿತ್ರರಚನೆಯಲ್ಲಿ ತೊಡಗುವುದು ಇವೆಲ್ಲಾ ಆಗ ಇವರು ತೋರಿಸುತ್ತಿದ್ದ ಚಮತ್ಕಾರಗಳು. ಇವರು ಚಿತ್ರ ಮಾಧ್ಯಮವೇ ಅಲ್ಲದೆ ಶಿಲ್ಪಕೃತಿಗಳ ರಚನೆಗಳನ್ನೂ ಮಾಡಿದರು, ದಂತದಲ್ಲಿ, ತೇಗ, ಬೀಟೆ ಮರಗಳಲ್ಲಿ 'ಪ್ಲಾಸ್ಟರ್ ಆಫ್ ಪ್ಯಾರಿಸ್ ಮಿಶ್ರಣದಲ್ಲಿ ಹೀಗೆ' ಎಲ್ಲಾ ಮಾಧ್ಯಮಗಳಲ್ಲಿಯೂ ಕೈಯಾಡಿಸಿದರು. ಶೀಘ್ರ ರೇಖಾರಚನೆ (ರ್‍ಯಾಪಿಡ್ ಸ್ಕೆಚಿಂಗ್) ಮತ್ತು ವ್ಯಕ್ತಿ ಚಿತ್ರಣ (ಪೋರ್ಟ್ರೈಟ್ ಪೈಂಟಿಂಗ್) ಇವರ ಇಷ್ಟದ ವಿಧಾನಗಳು. ಇವರಿಂದ ರಚಿತವಾದ ದೊಡ್ಡ ಪ್ರಮಾಣದ ಗಾಂಧಿ ಮತ್ತು ನೆಹರೂ ಅವರ ಚಿತ್ರಗಳನ್ನು ಅಂದಿನ ರಾಜ್ಯಪಾಲ ಶ್ರೀ ವಿ.ವಿ. ಗಿರಿ ಅವರು ನ್ಯಾಷನಲ್ ಕಾಲೇಜಿನ ಸಭಾಂಗಣದಲ್ಲಿ ಅನಾವರಣ ಮಾಡಿದರು. ಅವರ ಚಿತ್ರಗಳು ರಾಷ್ಟ್ರ ನಾಯಕರಾಗಿದ್ದ ಜವಹರಲಾಲರ ಗಮನವನ್ನೂ ಸೆಳೆದಿದ್ದುವು. ಒಮ್ಮೆ ನೆಹರೂಜೀ ಅವರು ಜೋಗ್ ಜಲಪಾತದ ವಿದ್ಯುದಾಗಾರ ಒಂದನ್ನು ಉದ್ಘಾಟಿಸಲು ಆಗಮಿಸಿದಾಗ ಕುಕ್ಕೆಯವರು ತಾವು ರಚಿಸಿದ ಜೋಗ್ ಜಲಪಾತದ ಸುಂದರ ಚಿತ್ರ ಒಂದನ್ನು ಪಂಡಿತಜೀ ಅವರಿಗೆ ಸಮರ್ಪಿಸಿದ್ದರು.

## ಕಲಾಚಟುವಟಿಕೆಗಳು

ನಗರದ ಬಹುತೇಕ ಎಲ್ಲಾ ಕಲಾ ಚಟುವಟಿಕೆಗಳಲ್ಲಿಯೂ ಅವರ ಪಾತ್ರ ಇರುತ್ತಿತ್ತು. ೧೯೫೯-೬೦ನೆಯ ವರ್ಷದಲ್ಲಿ ಬೆಂಗಳೂರಿನಲ್ಲಿ ಕಾಂಗ್ರೆಸ್ ಅಧಿವೇಶನಕ್ಕೆ ಬೃಹತ್ ಮಹಾದ್ವಾರವನ್ನು ಕಲಾತ್ಮಕವಾಗಿ ನಿರ್ಮಿಸಲು ಅಂದಿನ ಮುಖ್ಯಮಂತ್ರಿ ಶ್ರೀ ಕೆಂಗಲ್ ಹನುಮಂತಯ್ಯನವರ ನೇತೃತ್ವದಲ್ಲಿ ರಚಿತವಾದ ಉಪಸಮಿತಿಯಲ್ಲಿ ಕುಕ್ಕೆಯವರೂ ಸದಸ್ಯರಾಗಿದ್ದರು. ಮುಖ್ಯಮಂತ್ರಿಗಳ ಆಶಯಕ್ಕೆ ತಕ್ಕಂತೆ ಮಹಾದ್ವಾರ ರಚಿತವಾದಾಗ, ಸಮಿತಿಯ ಸದಸ್ಯರನ್ನು ಅಭಿನಂದಿಸಲು ಮುಖ್ಯಮಂತ್ರಿಗಳು ಸಮಾರಂಭವೇರ್ಪಡಿಸಿ ರಾಜ್ಯದ ಚಿತ್ರ ಕಲಾವಿದರ ಸಂಘಟನೆಗೆ ಅವರದೇ ಆದ ಸಂಸ್ಥೆಯೊಂದನ್ನು ರಚಿಸಿಕೊಂಡಿಲ್ಲಿ ಸರ್ಕಾರದ ವತಿಯಿಂದ ಎಲ್ಲಾ ಸೌಲಭ್ಯಗಳನ್ನೂ ಒದಗಿಸಿಕೊಡುವುದಾಗಿ ಭರವಸೆ ನೀಡಿದರು. ಇಂತಹ ಕಲಾಪ್ರೇಮಿ ಮುಖ್ಯಮಂತ್ರಿಗಳ ಅಭಿಲಾಷೆಯಂತೆ ಶ್ರೀಮಾನ್ ಎಂ. ಆರ್ಯ ಮೂರ್ತಿಗಳು ಮತ್ತು ಶ್ರೀ ಎಂ.ಎಸ್. ನಂಜುಂಡರಾಯರೊಂಗೆ ಕುಕ್ಕೆಯವರು ಪ್ರಾರಂಭಿಕ ಸಭೆಗಳನ್ನು ತಮ್ಮ ಚಿಕ್ಕಪೇಟೆಯ ಸ್ಟುಡಿಯೋದಲ್ಲಿಯೇ ನಡೆಸಿದರು. ೧೯೬೦ರ ಮೇ

೧೫ರಂದು 'ಮೈಸೂರು ಪ್ರದೇಶ ಚಿತ್ರಕಲಾ ಪರಿಷತ್" ಎಂಬ ಅಭಿದಾನದಿಂದ ಪ್ರಾರಂಭವಾದ ಇಂದಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನ ಸಂಸ್ಥಾಪಕ ಸದಸ್ಯರಲ್ಲಿ ಕುಕ್ಕೆಯವರ ಪಾತ್ರ ಪ್ರಮುಖವಾದದು.

ಅಷ್ಟೇ ಅಲ್ಲದೆ ಅಂದೇ ನೇಮಕವಾದ ಪದಾಧಿಕಾರಿಗಳಲ್ಲಿ ಅವರು ಈ ಕಲಾ ಸಂಸ್ಥೆಯ ಉಪಾಧ್ಯಕ್ಷರಾಗಿಯೂ, ಅವರ ಸಹೋದರ ಶ್ರೀ ಆರ್.ಎಸ್. ಕುಕ್ಕೆ ಸಹಕಾರ್ಯದರ್ಶಿಗಳಾಗಿಯೂ ನೇಮಕಗೊಂಡರು. ಪರಿಷತ್ತಿಗೆ ಅಂದು ಒಂದು ನೆಲೆ ಇಲ್ಲದಿದ್ದಾಗ ಪ್ರಾರಂಭಿಕ ಸಭೆಗಳು ಕುಕ್ಕೆಯವರ ಸ್ಟುಡಿಯೋದಲ್ಲಿ ನಡೆಯುತ್ತಿದ್ದವು. ಆ ಸಂಸ್ಥೆ ೧೯೬೫ರ ಆಗಸ್ಟ್ ೧೦ರಿಂದ ಪ್ರಾರಂಭಿಸಿ ಪ್ರತಿವರ್ಷವೂ ನಡೆಸುತ್ತಿದ್ದ ಅಖಿಲ ಭಾರತ ಚಿತ್ರಕಲಾ ಪ್ರದರ್ಶನಗಳ ಏರ್ಪಾಟಿನಲ್ಲಿ ಶ್ರೀ. ಎಂ.ಎಸ್. ನಂಜುಂಡರಾಯರೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ಪ್ರದರ್ಶನಗಳು ಯಶಸ್ವಿಯಾಗಲು ದುಡಿದವರು ಕುಕ್ಕೆಯವರು. ನಂತರ ಅವರ ಜೀವನದ ಕೊನೆಯ ದಿನಗಳವರೆಗೂ ಚಿತ್ರಕಲಾ ಪರಿಷತ್ತಿನ ಸಹಕಾರ್ಯದರ್ಶಿಗಳಾಗಿ ಮುಂದುವರೆದರು.

## ಕಲಾಶಿಕ್ಷಕರಾಗಿ

ಮುಂದೆ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರ ಸೌಜನ್ಯದಿಂದ ಮಲ್ಲೇಶ್ವರದ ಎಂಟನೇ ತಿರುವಿನಲ್ಲಿ ಗಾಂಧಿ ಭವನದ ಮಹಡಿಯ ಮೇಲಿನ ಕೋಣೆಯೊಂದರಲ್ಲಿ ಪರಿಷತ್ತಿನ ಕಾರ್ಯಾಲಯ ಪ್ರಾರಂಭವಾಗಿ ೧೯೬೪ರ ಸೆಪ್ಟೆಂಬರ್ ೨೫ರಂದು ಪರಿಷತ್ತು ಪ್ರಾರಂಭಿಸಿದ "ಚಿತ್ರಕಲಾ ವಿದ್ಯಾಲಯ"ವೆಂಬ ಹೆಸರಿನ ಕಲಾ ಶಿಕ್ಷಣ ಶಾಲೆಗೆ ಪ್ರಥಮ ಪ್ರಾಂಶುಪಾಲರಾಗಿ ನಿಯೋಜಿತರಾದರು ಶ್ರೀ ಕುಕ್ಕೆಯವರು. ಅಂದಿನಿಂದ ಅನೇಕ ವರ್ಷ ಬಹುಮಂದಿ ಕಲಾವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಕೊಟ್ಟು ಅವರನ್ನು ಉತ್ತಮ ಕಲಾವಿದರಾಗಿ ರೂಪಿಸಿದರು. ಇಂದು ಪ್ರಮುಖ ಕಲಾವಿದರೆಂದು ಹೆಸರು ಪಡೆದಿರುವ ಶ್ರೀ ಯೂಸಫ್ ಅರಕ್ಕಲ್, ಶ್ರೀಮತಿ ಎಂ.ಜೆ. ಕಮಲಾಕ್ಷಿ, ಮುಂತಾದವರು ಕುಕ್ಕೆಯವರ ಶಿಷ್ಯ ವೃಂದಕ್ಕೆ ಸೇರಿದವರು. ಅಂದು ೨೨ ಮಂದಿ ವಿದ್ಯಾರ್ಥಿಗಳಿಂದ ಪ್ರಾರಂಭವಾದ ಚಿತ್ರಕಲಾ ವಿದ್ಯಾಲಯ ಇಂದು ನೂರಾರು ಕಲಾ ವಿದ್ಯಾರ್ಥಿಗಳಿಗೆ ಸ್ನಾತಕೋತ್ತರ ಪದವಿಗಳನ್ನು ನೀಡುವ ಚಿತ್ರಕಲಾ ಮಹಾವಿದ್ಯಾಲಯವಾಗಿ ಬೆಳೆದು ಬಂದಿದೆ. ಚಿತ್ರಕಲಾ ಪರಿಷತ್ತಿನ ಹೆಗ್ಗಳಿಕೆಯಾದ ಸಾಂಪ್ರದಾಯಿಕ ಚಿತ್ರಗಳ ಸಂಗ್ರಹದಲ್ಲಿಯೂ ಅವರ ಪಾತ್ರ ಪ್ರಮುಖವಾದುದು.

## ಕಲಾಪ್ರದರ್ಶನಗಳು

ಅ.ನ. ಸುಬ್ಬರಾಯರು ನಡೆಸುತ್ತಿದ್ದ ಕಲಾಮಂದಿರದಲ್ಲಿ ಶಿಕ್ಷಕರಾಗಿ ಕೆಲಕಾಲ ಕೆಲಸಮಾಡಿದ್ದ ಕುಕ್ಕೆಯವರು, ಕಲಾಮಂದಿರದ ೩೪ನೆಯ ವಾರ್ಷಿಕೋತ್ಸವದ ಅಂಗವಾಗಿ ಏರ್ಪಡಿಸಿದ್ದ ಕಲಾ ಪ್ರದರ್ಶನದಲ್ಲಿ ತಮ್ಮ ಕೃತಿಗಳನ್ನು ಪ್ರದರ್ಶಿಸಿದ್ದರು. ಆ ನಂತರ ಲಲಿತಕಲಾ ಅಕಾಡೆಮಿಯು ಪ್ರತಿವರ್ಷವೂ ಏರ್ಪಡಿಸುತ್ತಿದ್ದ ಕಲಾ ಪ್ರದರ್ಶನಗಳಲ್ಲಿ ಹಲವು ಬಾರಿ ಮತ್ತು ಮ್ಯಾಕ್ಸ್‌ಮುಲ್ಲರ್ ಭವನದಲ್ಲಿ ಒಮ್ಮೆ ಪ್ರಾದೇಶಿಕ ವಿನ್ಯಾಸ ಕೇಂದ್ರದ

ಕಲಾವಿದರುಗಳೊಂದಿಗೆ ತಮ್ಮ ಚಿತ್ರಗಳನ್ನು ಪ್ರದರ್ಶಿಸಿದ್ದರು. ಕರ್ನಾಟಕ ಚಿತ್ರಕಲಾ ಪರಿಷತ್ತು ಆಗಾಗ ಏರ್ಪಡಿಸುತ್ತಿದ್ದ ಕರ್ನಾಟಕ ಕಲಾವಿದರ ಕಲಾಪ್ರದರ್ಶನಗಳಲ್ಲಿ ಅವರ ಚಿತ್ರಗಳು ಇದ್ದೇ ಇರುತ್ತಿದ್ದುವು. ಅಲ್ಲದೆ ಪರಿಷತ್ತು ಏರ್ಪಡಿಸುತ್ತಿದ್ದ, ಕಲಾ ಶಿಬಿರಗಳಲ್ಲಿ, ಅವರು ಪ್ರಮುಖ ಪಾತ್ರವಹಿಸುತ್ತಿದ್ದರು. ಪ್ರಾದೇಶಿಕ ವಿನ್ಯಾಸ ಕೇಂದ್ರದ ಅಂದಿನ ಮುಖ್ಯ ವಿನ್ಯಾಸಕಾರರಾಗಿದ್ದ ಹಾಗೂ ಕೆಲವು ಕಾಲ ಅವರ ಸಹೋದ್ಯೋಗಿಗಳೂ ಆಗಿದ್ದ ಬಂಗಾಳಿ ಕಲಾವಿದ ಶ್ರೀ ಸೇನ್ ಗುಪ್ತ ಅವರೊಂದಿಗೆ ೧೯೭೫ನೆಯ ಮಾರ್ಚ್ ೨ನೇ ತಾರೀಖು "ಫ್ರೆಂಚ್ ಸಂಸ್ಕೃತಿ ಕೇಂದ್ರ" (ಅಲಿಯೊನ್ಸ್ ಫ್ರಾನ್ಸೆ)ನಲ್ಲಿ ಏರ್ಪಡಿಸಿದ್ದ ಐದು ದಿನಗಳ ಕಲಾ ಪ್ರದರ್ಶನದಲ್ಲಿ ತೇಗ ಮತ್ತು ಬೀಟೆಯ ಮರದ ಕೆತ್ತನೆಗಳಲ್ಲಿ ರೂಪುಗೊಂಡಿದ್ದ ಅವರ ಶಿಲ್ಪಕೃತಿಗಳನ್ನು ಪ್ರಯೋಗಾರ್ಥವಾಗಿ ರಚಿಸಿದ್ದ ನವ್ಯ ಚಿತ್ರಗಳೊಂದಿಗೆ ಪ್ರಥಮಬಾರಿ ಪ್ರದರ್ಶಿಸಿದ್ದರು.

ಕುಕ್ಕೆಯವರೇ ಏರ್ಪಡಿಸಿದ್ದ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳೆಂದರೆ ೧೯೩೨ರ ನವೆಂಬರ್ ೧೯ ರಂದು ಬಸವನಗುಡಿಯ ವಾಡಿಯಾ ರಸ್ತೆಯಲ್ಲಿರುವ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿ ಲಲಿತಕಲಾ ಅಕಾಡೆಮಿಯ ಸಹಕಾರದಿಂದ ಏರ್ಪಡಿಸಿದ್ದ ಕಲಾಪ್ರದರ್ಶನ. ಈ ಪ್ರದರ್ಶನದಲ್ಲಿ ಅವರು ಉಗುರಿನಿಂದ, ಚಾಕುವಿನ ಅಲಗಿನಿಂದ, ಕುಂಚದಿಂದ ರಚಿತವಾಗಿದ್ದ ಸುಮಾರು ೪೬ ಕೃತಿಗಳನ್ನು ಪ್ರದರ್ಶಿಸಿದ್ದರು.

ಕುಕ್ಕೆಯವರು ವೆಂಕಟಪ್ಪ ಕಲಾ ಭವನದಲ್ಲಿಯೂ ಮತ್ತು ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನಲ್ಲಿಯೂ ೧೯೩೫ನೇ ಅಕ್ಟೋಬರ್ ಮತ್ತು ನವೆಂಬರ್ ತಿಂಗಳುಗಳಲ್ಲಿ ಏರ್ಪಡಿಸಿದ್ದ ಚಿತ್ರಕಲಾ ಪ್ರದರ್ಶನಗಳು ತುಂಬಾ ವಿಶಿಷ್ಟವಾದವು. ಈ ಪ್ರದರ್ಶನಗಳಲ್ಲಿ ಪುರಾಣ, ಇತಿಹಾಸಗಳಿಗೆ ಸಂಬಂಧಿಸಿದ ಸುಮಾರು ೨೫ ಮಂದಿಯ ವ್ಯಕ್ತಿ ಚಿತ್ರಗಳಿದ್ದುವು. ಇವರ ಮತ್ತೊಂದು ಕಲಾಪ್ರದರ್ಶನ ಮ್ಯಾಕ್ಸ್ ಮುಲ್ಲರ್ ಭವನದಲ್ಲಿ ೧೯೭೮ನೆಯ ಸೆಪ್ಟೆಂಬರ್ ೧೪ ರಿಂದ ೨೩ರವರೆಗೆ ನಡೆಯಿತು. ಈ ಪ್ರದರ್ಶನದಲ್ಲಿ ಪ್ರಾಚೀನ ಕಾವ್ಯಗಳನ್ನಾಧರಿಸಿ ರಚಿಸಿದ "ಮೇನಕಾ ವಿಶ್ವಾಮಿತ್ರ", "ಕುಮಾರ ಸಂಭವ" ಮುಂತಾದ ೨೦ ಕೃತಿಗಳನ್ನು ಪ್ರದರ್ಶಿಸಿದ್ದರು. ಇದಾದ ನಂತರ ೧೯೮೧ನೇ ಜನವರಿ ೭ನೇ ತಾರೀಖು ಬ್ರಿಗೇಡ್ ರಸ್ತೆಯಲ್ಲಿರುವ ರಾಮನೀಲ್ ಕಲಾ ಗ್ಯಾಲರಿಯಲ್ಲಿ ತಮ್ಮ ೧೮ ಕಲಾಕೃತಿಗಳನ್ನು ಪ್ರದರ್ಶಿಸಿದ್ದರು.

ಮೈಸೂರಿನ ಲಲಿತಕಲಾ ಸಂಘವು ೧೯೭೪ನೆಯ ಜುಲೈ ತಿಂಗಳಲ್ಲಿ ಮೈಸೂರು ದಸರಾ ವಸ್ತುಪ್ರದರ್ಶನದ ಕಟ್ಟಡದಲ್ಲಿ ಶ್ರೀಮಾನ್ ಸೆನ್‌ಗುಪ್ತಾರವರೊಂದಿಗೆ ಕುಕ್ಕೆಯವರ ಚಿತ್ರಗಳನ್ನೂ ಪ್ರದರ್ಶಿಸಿತ್ತು.

## ಬಹುಮಾನ, ಪ್ರಶಸ್ತಿಗಳು

ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ "ಚಿತ್ರಕಲಾ ಪ್ರದರ್ಶನ ವಿಭಾಗವು" ಪ್ರಮುಖವಾಗಿರುತ್ತಿದ್ದ ಕಾಲ. ಆಗ್ಯೆ ರಾಜ್ಯದಲ್ಲಿ ನಡೆಯುತ್ತಿದ್ದುದು ಇದೊಂದೇ ಪ್ರತಿಷ್ಠಿತ ಕಲಾ ಪ್ರದರ್ಶನ. ಈ ಪ್ರದರ್ಶನದಲ್ಲಿ ಬಹುಮಾನ ಗಳಿಸುವುದೊಂದು ಪ್ರತಿಷ್ಠೆಯ

ಸಂಕೇತವಾಗಿತ್ತು. ಕುಕ್ಕೆಯವರು ೧೯೪೦ ರಿಂದ ನಿರಂತರವಾಗಿ ಈ ಕಲಾಪ್ರದರ್ಶನಕ್ಕೆ ತಮ್ಮ ಕಲಾಕೃತಿಗಳನ್ನು ಕಳುಹಿಸುತ್ತಿದ್ದರು. ಮತ್ತು ಸತತವಾಗಿ ಸುಮಾರು ೩೦ಕ್ಕೂ ಮೇಲ್ಪಟ್ಟು ಬಹುಮಾನಗಳನ್ನು ಪಡೆದರು. ಅನೇಕ ವರ್ಷ ಅವರಿಗೆ ಪ್ರದರ್ಶನದ ಪ್ರಥಮ ಬಹುಮಾನವೇ ದೊರೆಯುತ್ತಿತ್ತು. ಸತತವಾಗಿ ಏಳು ವರ್ಷಗಳು ಅವರ ಚಿತ್ರಗಳಿಗೆ ಪ್ರಥಮ ಬಹುಮಾನ ಸಿಕ್ಕಿತೆಂದ ಮೇಲೆ ಅಂದಿನ ಕಲಾವಿದರ ಸಮೂಹದಲ್ಲಿ ಅವರ ಸ್ಥಾನ ಏನಿತ್ತೆಂಬುದು ವೇದ್ಯವಾಗುತ್ತದೆ. ಹಾಗೆ ಅವರು ಪ್ರಥಮ ಬಹುಮಾನವನ್ನು ೧೯೪೦ ರಿಂದ ಪ್ರಾರಂಭಿಸಿ ೪೪, ೫೦, ೫೨, ೧೯೫೫ರಲ್ಲಿ (ಎರಡು ಬಹುಮಾನಗಳು) ಮತ್ತು ೧೯೭೧ರವರೆಗೂ ಗಳಿಸಿದರು.

ಮುಂದೆ ಬೆಂಗಳೂರು ನಗರವು ಚಿತ್ರಕಲಾ ಪ್ರದರ್ಶನಗಳ ಕೇಂದ್ರವಾಯಿತು. ಚಿತ್ರಕಲಾ ಪರಿಷತ್ತಿನ ಕಲಾ ಪ್ರದರ್ಶನಗಳಲ್ಲಿಯೂ ಕುಕ್ಕೆಯವರ ಚಿತ್ರಗಳು ಬಹುಮಾನಾರ್ಹವಾಗಿ ಪ್ರಶಂಸಿಸಲ್ಪಡುತ್ತಿದ್ದವು. ೧೯೬೩ನೇ ಆಗಸ್ಟ್ ೧೦ ರಂದು ಏರ್ಪಡಿಸಿದ್ದ ಅಖಿಲ ಭಾರತ ಕಲಾ ಪ್ರದರ್ಶನದಲ್ಲಿ ಇವರು ರಚಿಸಿದ "ಚಿಕ್ಕಮ್ಮ" ಎಂಬ ಚಿತ್ರಕ್ಕೆ ಪ್ರಜಾವಾಣಿ ಪತ್ರಿಕೆಯವರು ಕೊಡ ಮಾಡಿದ್ದ ವಿಶೇಷ ಬಹುಮಾನದ ಜೊತೆಗೆ ಅವರೇ ರಚಿಸಿಕೊಂಡಿದ್ದ ಅವರದೇ ವ್ಯಕ್ತಿ ಚಿತ್ರಕ್ಕೆ ಎರಡನೇ ಬಹುಮಾನವೂ ದೊರೆಯಿತು. ಅನಂತರ ಪರಿಷತ್ತು ಏರ್ಪಡಿಸಿದ್ದ ಕರ್ನಾಟಕ ಕಲಾವಿದರ ಚಿತ್ರ ಪ್ರದರ್ಶನದಲ್ಲಿ ಅವರ ಚಿತ್ರ "ಒಡೆದ ಸೌಂದರ್ಯ" (ಬ್ರೋಕನ್ ಬ್ಯೂಟಿ) ಅತ್ಯುತ್ತಮ ಚಿತ್ರವೆಂದು ಪರಿಗಣಿತವಾಯಿತು. ಕರ್ನಾಟಕ ಲಲಿತಕಲಾ ಅಕಾಡೆಮಿಯವರು ಏರ್ಪಡಿಸಿದ್ದ ವಾರ್ಷಿಕ ಕಲಾ ಪ್ರದರ್ಶನಗಳಲ್ಲಿಯೂ ಕುಕ್ಕೆಯವರ ಚಿತ್ರಗಳಿರುತ್ತಿದ್ದುವು. ೧೯೭೩ನೆಯ ವಾರ್ಷಿಕ ಪ್ರದರ್ಶನದಲ್ಲಿ ಅವರು ರಚಿಸಿದ ಭಿತ್ತಿ ಚಿತ್ರದ ನಕಲೊಂದು ಬಹುಮಾನ ಗಳಿಸಿತು.

ನಲವತ್ತೊಂಭತ್ತನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನವು ಶಿವಮೊಗ್ಗದಲ್ಲಿ ಶ್ರೀ ಎಸ್.ವಿ. ರಂಗಣ್ಣನವರ ಅಧ್ಯಕ್ಷತೆಯಲ್ಲಿ ನಡೆದಾಗ ಇವರ ಕಲಾ ಪ್ರತಿಭೆಯನ್ನು ಗುರುತಿಸಿ ಕನ್ನಡ ಸಾಹಿತ್ಯ ಪರಿಷತ್ತು ಕುಕ್ಕೆಯವರಿಗೆ ಸನ್ಮಾನವೇರ್ಪಡಿಸಿತ್ತು. ಅಂದಿನ ಮೈಸೂರು ಪ್ರದೇಶ ಚಿತ್ರಕಲಾ ಪರಿಷತ್ತು ಅಖಿಲ ಭಾರತ ಚಿತ್ರಕಲಾ ಪ್ರದರ್ಶನಗಳನ್ನು ವಿಧಾನ ಸೌಧದ ಔತಣ ಸಭಾಂಗಣ (ಬ್ಯಾಂಕ್ವೆಟ್ ಹಾಲ್)ದಲ್ಲಿ ಪ್ರತಿವರ್ಷವೂ ಏರ್ಪಡಿಸುತ್ತಿದ್ದು ಆ ಸಮಯದಲ್ಲಿ ನಾಡಿನ ಖ್ಯಾತ ಕಲಾವಿದರನ್ನು ಸನ್ಮಾನಿಸುವ ಪರಿಪಾಠವನ್ನು ಇಟ್ಟುಕೊಂಡಿತ್ತು. ಹೀಗೆ ದಿನಾಂಕ ೩೦-೩-೧೯೭೩ರ ಸಂಜೆ ನಡೆದ ಸನ್ಮಾನ ಸಮಾರಂಭದಲ್ಲಿ ಇತರ ಐದು ಮಂದಿ ಕಲಾವಿದರೊಂದಿಗೆ ಕುಕ್ಕೆಯವರನ್ನು ಸನ್ಮಾನಿಸಿ ಅವರ ಸೇವೆಗೆ ತನ್ನ ಕೃತಜ್ಞತೆಯನ್ನರ್ಪಿಸಿತು.

ಕರ್ನಾಟಕ ಲಲಿತಕಲಾ ಅಕಾಡೆಮಿಯು ೮೨ರಲ್ಲಿ ಪ್ರಶಸ್ತಿಗೆ ಆಯ್ಕೆ ಮಾಡಿದ ಐದು ಮಂದಿ ಕಲಾವಿದರಲ್ಲಿ ಕುಕ್ಕೆಯವರೂ ಒಬ್ಬರು. ಕುಕ್ಕೆಯವರು ಚಿತ್ರಕಲೆಯಲ್ಲಿ ರಾಜ್ಯಕ್ಕೆ ಸಲ್ಲಿಸಿದ ವಿಶಿಷ್ಟ ಸೇವೆಯನ್ನು ಗಮನಿಸಿ ಕರ್ನಾಟಕ ಸರ್ಕಾರವು ೧೯೭೬ನೆಯ ನವೆಂಬರ್ ಒಂದರಂದು ನಡೆದ ಸಮಾರಂಭದಲ್ಲಿ ಕುಕ್ಕೆಯವರನ್ನು ಸನ್ಮಾನಿಸಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ನೀಡಿತು. ಈ ರೀತಿ ಕಲಾವೃಂದವೂ, ಸಂಸ್ಥೆಗಳೂ, ಕರ್ನಾಟಕ ಸರ್ಕಾರವೂ ಈ ಹಿರಿಯ ಕಲಾವಿದರನ್ನು ಗುರುತಿಸಿದೆ.

## ಕಲಾಕೃತಿಗಳ ಸಂಗ್ರಹ

ಕುಕ್ಕೆಯವರು ಪ್ರಾರಂಭದ ದಿನಗಳಲ್ಲಿ ಕಷ್ಟಕೋಟಲೆಗಳಿಗೆ ಸಿಕ್ಕಿದರೂ ಕ್ರಮೇಣ ಅವರ ಚಿತ್ರಗಳನ್ನು ಕೊಳ್ಳುವವರ ಸಂಖ್ಯೆ ಗಣನೀಯವಾಯಿತು. ಸರ್ಕಾರ, ಸಂಸ್ಥೆಗಳು, ಸಾರ್ವಜನಿಕರು ಅವರ ಚಿತ್ರಗಳನ್ನು ಕೊಂಡು ತಮ್ಮ ಸಂಗ್ರಹಕ್ಕೆ ಸೇರಿಸಿಕೊಂಡರು. ಹೀಗೆ ಸಂಗ್ರಹಗಳಿಗೆ ಹೋಗಿರುವ ಅವರ ಚಿತ್ರಗಳು ವಿದೇಶಗಳಲ್ಲೂ ಇವೆ. ಕರ್ನಾಟಕ ಲಲಿತಕಲಾ ಅಕಾಡೆಮಿ, ಸರ್ಕಾರದ ನೀರಾವರಿ ಇಲಾಖೆಯ ತುಂಗ, ಭದ್ರ, ಮತ್ತು ನುಗು ಜಲಾಶಯಗಳ ಅತಿಥಿಗೃಹಗಳು, ಶಿವಮೊಗ್ಗದ ಪ್ರವಾಸಿ ಅತಿಥಿ ಗೃಹ, ಕರ್ನಾಟಕ ಸಂಘ ಮೈಸೂರು ವಿಶ್ವವಿದ್ಯಾಲಯದ ಪ್ರಸಾರಾಂಗದಲ್ಲಿ, ಕೆನರಾ ಬ್ಯಾಂಕಿನ ಪ್ರಧಾನ ಕಛೇರಿಯಲ್ಲಿ, ಬೆಂಗಳೂರಿನ ಮ್ಯೂಸಿಯಂನಲ್ಲಿ ಇವರ ಕೃತಿಗಳಿವೆ. ಒಟ್ಟಿನಲ್ಲಿ ಕರ್ನಾಟಕದ ಅನೇಕ ಕಡೆ ಕುಕ್ಕೆಯವರ ಚಿತ್ರಗಳು ವಿರಾಜಿಸುತ್ತಿವೆ.

## ಸುಬ್ರಹ್ಮಣ್ಯ ಕಲಾ ಗ್ಯಾಲರಿ

ಹೀಗೆ ಸಂಗ್ರಹಗಳಿಗೆ ಹೋದ ನಂತರವೂ ಉಳಿದ ಚಿತ್ರಗಳ ನಿರಂತರ ಪ್ರದರ್ಶನಕ್ಕಾಗಿ ಜಯನಗರ 'ಟಿ' ಬ್ಲಾಕಿನ ತಮ್ಮ ಮನೆಯಲ್ಲಿಯೇ ತಮ್ಮ ತೀರ್ಥರೂಪರ ಹೆಸರಿನಲ್ಲಿ ೧೨-೬-೧೯೮೨ರಲ್ಲಿ ಸುಬ್ರಹ್ಮಣ್ಯ ಆರ್ಟ್ ಗ್ಯಾಲರಿ ಎಂಬ ಕಲಾ ಗ್ಯಾಲರಿಯನ್ನು ಪ್ರಾರಂಭಿಸಿದರು.

ಕುಕ್ಕೆಯವರ ನಿಧನದ ನಂತರ ಅವರ ಕುಟುಂಬದವರು ಈ ಗ್ಯಾಲರಿಯ ಎಲ್ಲ ಚಿತ್ರಗಳನ್ನೂ ಚಿತ್ರಕಲಾ ಪರಿಷತ್ತಿಗೆ ಕೊಡಮಾಡಿರುವರು. ಕುಕ್ಕೆಯವರ ಹೆಸರಿನಲ್ಲಿ ಪ್ರತ್ಯೇಕ ಗ್ಯಾಲರಿ ತೆಗೆದು ಅವರ ಚಿತ್ರಗಳ ನಿರಂತರ ಪ್ರದರ್ಶನ ನಡೆಸಿ ಸಾರ್ವಜನಿಕರ ವೀಕ್ಷಣೆಗೆ ಅನುವು ಮಾಡಿಕೊಡುವ ಚಿತ್ರಕಲಾ ಪರಿಷತ್ತಿನ ಆಶಯ ಇದೀಗ ಕೈಗೂಡಿದೆ.

## ಕೊನೆಯ ದಿನಗಳು

ದೆಹಲಿಯ ಆಲ್ ಇಂಡಿಯಾ ಫೈನ್ ಆರ್ಟ್ಸ್ ಅಂಡ್ ಕ್ರಾಫ್ಟ್ ಸೊಸೈಟಿ ೧೯೮೫ರಲ್ಲಿ ಕುಕ್ಕೆಯವರನ್ನು ಸನ್ಮಾನಿಸಿತು. ಆ ಸಮಾರಂಭದಲ್ಲಿ ಪಾಲ್ಗೊಳ್ಳಲು ದೆಹಲಿಗೆ ತೆರಳಿದ ಕುಕ್ಕೆಯವರು ಅಲ್ಲಿ ಖರೀದಿಸಿದ ಹೊಸ ಪಾದರಕ್ಷೆಗಳನ್ನು ಮೆಟ್ಟಿದಾಗ ಉಂಟಾದ ಚಿಕ್ಕ ಗಾಯ ಉಲ್ಬಣವಾಗಿ, ಅದೇ ಕಾರಣ ಮಲಗಿದವರು, ಮತ್ತೊಮ್ಮೆ ಕಾಲುಜಾರಿ ಸಂಭವಿಸಿದ ಮೂಳೆ ಮುರಿತದ ಕಾರಣ ಮತ್ತೆ ಮಲಗಿದ್ದರು. ಕ್ರಿಯಾಶೀಲರಾಗಿ ದೃಢಕಾಯರಾಗಿದ್ದ ಅವರು ಮೇಲೇಳಲಾರದೆ ಮಲಗಿದಾಗ ಮಧುಮೇಹವೇ ಮೊದಲಾದ ಹಲವು ಬೇನೆಗಳಿಗೆ ತುತ್ತಾದರು. ಮುಂದೆ ಕಾಲಿನ ಗಾಯವು ತೀವ್ರ ರೂಪಕ್ಕೆ ತಿರುಗಿದಾಗ ಕಾಲನ್ನೇ ತೆಗೆಸಬೇಕಾಗಿ ಬಂದುದು ದುರ್ದೈವ. ಉತ್ತಮ ಚಿಕಿತ್ಸೆಗೆ ಸರ್ಕಾರ ಮತ್ತು ಸಂಸ್ಥೆಗಳಿಂದ ಸಹಾಯ ಒದಗಿ ಬಂದರೂ ಅವರ ಆರೋಗ್ಯ ಸುಧಾರಿಸಲೇ ಇಲ್ಲ. ೧೯೯೧ನೆಯ ವರ್ಷದ ಪ್ರಥಮ ದಿನವಾದ ಜನವರಿ ಒಂದರಂದು ಕುಕ್ಕೆ ಶ್ರೀಕಂಠ ಶಾಸ್ತ್ರಿಗಳು ಪತ್ನಿ, ಮೂವರು ಪುತ್ರರು, ಪುತ್ರಿ ಹಾಗೂ ಅಳಿಯಂದರನ್ನಗಲಿ ತಮ್ಮ ೭೩ನೆಯ ವಯಸ್ಸಿನಲ್ಲಿ ವಿಧಿವಶರಾದರು.

## ಕೃತಿಗಳ ಸಮೀಕ್ಷೆ

ಪ್ರಸಿದ್ಧ ಪಂಡಿತರ ಮನೆತನದಿಂದ ಬಂದಿದ್ದ ಕುಕ್ಕೆಯವರಲ್ಲಿ ಪರಂಪರಾಗತ ಸಾಹಿತ್ಯ ಕಲಾ ಸಂಸ್ಕಾರಗಳು ಸ್ವಾಭಾವಿಕವಾಗಿಯೇ ಮೈಗೂಡಿದ್ದುವು. ಅವರ ತಂದೆಯವರು ಶ್ರವ್ಯ ಕಾವ್ಯಗಳನ್ನು ಬರೆದರೆ, ಮಗ ಆ ಕಾವ್ಯ ಸನ್ನಿವೇಶಗಳನ್ನು ದೃಶ್ಯ ರೂಪದಲ್ಲಿ ಚಿತ್ರಕಲೆಯಲ್ಲಿ ಚಿತ್ರಿಸಿದರು. ಸಂಸ್ಕೃತ ಕಾವ್ಯ, ಶ್ಲೋಕಗಳ ತೀರ ಸೂಕ್ಷ್ಮ ವರ್ಣನೆಗಳನ್ನು ಆಧರಿಸಿ ರೂಪುಗೊಂಡ ಅವರ ಒಂದೊಂದು ಕೃತಿಯೂ ಅಪಾರ ಶ್ರಮದ ಕುಸುರಿ ಕೆಲಸದಿಂದ ವೀಕ್ಷಕರಿಗೆ ಯಾವುದೇ ಶ್ರಮವನ್ನು ಕೊಡದೆ ಸಾಮಾನ್ಯ ಜನತೆಯನ್ನು ಸಹ ರಂಜಿಸಲು ಬೇಕಾದ ಸಾಂಸ್ಕೃತಿಕ ಅಗತ್ಯವನ್ನು ಪೂರೈಸಿವೆ. ಒಗಟಿನಂತೆ ಮುಂದೆ ನಿಲ್ಲುವ ನವ್ಯ ಕಲೆಯಲ್ಲಿಯೂ ಕುಕ್ಕೆಯವರು ಹಲವು ಪ್ರಯೋಗಗಳನ್ನು ನಡೆಸಿದರಾದರೂ ಆ ಪ್ರಕಾರ ಅವರಿಗೆ ಒಗ್ಗಿ ಬರಲಿಲ್ಲ.

ಕುಕ್ಕೆಯವರ ಚಿತ್ರಗಳ ವಿಶೇಷ ಎಂದರೆ, ಭಾರತೀಯ ಸಂವೇದನೆಗಳಿಗನುಗುಣವಾಗಿ, ಸುಪ್ರಸಿದ್ಧ ಸಾಹಿತ್ಯಿಕ ಮೇರುಕೃತಿಗಳಲ್ಲಿ ಅಡಕವಾದ ಮಹತ್ವಪೂರ್ಣ ಹಾಗೂ ಅರ್ಥವತ್ತಾದ ಸನ್ನಿವೇಶಗಳನ್ನೂ, ಘಟನೆಗಳನ್ನೂ ಚಿತ್ರಕಲಾಕೃತಿಗಳಾಗಿ ಪರಿವರ್ತಿಸಿದುದು; ಕವಿಗಳ ಶಬ್ದ ಸೃಷ್ಟಿಯನ್ನು ದೃಶ್ಯ ರೂಪದಲ್ಲಿ ಶಾಶ್ವತಗೊಳಿಸಲು ಅವರು ಬಳಸುತ್ತಿದ್ದ ವರ್ಣ ವೈವಿಧ್ಯ ಮತ್ತು ನೀಳರೇಖಾ ವಿಲಾಸ. ಅವರ ವರ್ಣ ಲೇಪನದ ವಿಶೇಷ ಎಂದರೆ ಬಂಗಾಳಿ ಕಲಾ ಪಂಥದವರು ಕಲಾ ಸೌಂದರ್ಯದ ಸೊಬಗನ್ನು ವಿಸ್ತರಿಸಲು ಬಳಸುತ್ತಿದ್ದ ಬಣ್ಣಗಳನ್ನು ಹಚ್ಚಿ, ತೊಳೆದು ಮತ್ತೆ ಮತ್ತೆ ಹಚ್ಚುವ ವಿಧಾನ (ವಾಷ್ ಮೆಥೆಡ್). ಈ ವಿಧಾನವು ಈಚಿನ ಕಲಾವಿದರಲ್ಲಿ ವಿರಳವಾಗಿದೆಯಾದರೂ ಈ ವಿಧಾನವನ್ನು ಬಳಸಿ ಚಿತ್ರಿತವಾದ ಕೃತಿಗಳು ಈಗಲೂವಿನೂತನ ವರ್ಣ ಸೌಂದರ್ಯವನ್ನೂ ಶುಭ್ರತೆಯ ಮೆರಗನ್ನೂ ಪ್ರದರ್ಶಿಸಿ ವೀಕ್ಷಕರ ಮನಸ್ಸನ್ನೇ ಗೆಲ್ಲುತ್ತವೆ.

ಅವರು ಬಳಸುತ್ತಿದ್ದ ನೀಳ ರೇಖೆಗಳದೇ ಒಂದು ವೈಶಿಷ್ಟ್ಯ. ಭಾರತೀಯ ಪೌರಾಣಿಕ ಕಾವ್ಯ ದೃಶ್ಯಗಳಿಗೆ ಪಶ್ಚಿಮದ ಅಕಾಡೆಮಿಕ್ ಸೂತ್ರಗಳನ್ನು ಸಮನ್ವಯಗೊಳಿಸುತ್ತವೆ ಅವು. ಆಧ್ಯಾತ್ಮಿಕ ಪರಿಮಳದಿಂದ, ಭಾವ ಲಾವಣ್ಯದ ಸಹಚರ್ಯೆಯಿಂದ, ಸಾಂದ್ರವಾದ ಅನುಭವ, ಚಿತ್ರವತ್ತಾದ ನಿರೂಪಣೆಗಳಿರುವ ಇತರ ಚಿತ್ರಗಳು ವಿಶಿಷ್ಟವಾದವು. ಆದುದರಿಂದಲೇ ಇವರ ಕಲಾಕೃತಿ ಎಲ್ಲಿಯೇ ಇರಲಿ ನೋಡಿದಾಕ್ಷಣವೇ ಇದು ಕುಕ್ಕೆಯವರ ಕೃತಿ ಎಂದು ಗುರುತಿಸುವಷ್ಟು ಮಟ್ಟಿನ ತಮ್ಮ ಸ್ವಂತಿಕೆಯ ಛಾಪನ್ನು ಇವರು ತಮ್ಮ ಕೃತಿಗಳಲ್ಲಿ ತುಂಬಿಸಿದ್ದಾರೆ.

ವ್ಯಕ್ತಿಗಳ ಭಾವಚಿತ್ರಗಳ ರಚನೆಯಲ್ಲಿ ಅವರದೇ ಒಂದು ವಿಶೇಷ. ಅವರು ರಚಿಸಿದ ಶೃಂಗೇರಿ ಸ್ವಾಮಿಗಳ ಚಿತ್ರವಾಗಲಿ, ರಾಷ್ಟ್ರನಾಯಕರ ಚಿತ್ರಗಳಾಗಲಿ ವ್ಯಕ್ತಿಗಳ ಮನಃಸತ್ವವನ್ನೂ, ಧೀಮಂತಿಕೆಯನ್ನೂ ಅವರ ಕ್ಷೇತ್ರದಲ್ಲಿನ ಸಾಧನೆಗಳ ಫಲವಾಗಿ ಮುಖಭಾವದಲ್ಲಿ ಮೂಡಿರುವ ಸಂತೃಪ್ತಿಯನ್ನು ಚಿತ್ರಗಳಲ್ಲಿ ತರುತ್ತಿದ್ದರು. ಯುವ ಕಲಾವಿದರ ಮಾರ್ಗದರ್ಶನಕ್ಕಾಗಿ ಕಲಾಶಿಬಿರಗಳಲ್ಲಿ ನಡೆಯುತ್ತಿದ್ದ ಪ್ರಾತ್ಯಕ್ಷಿಕೆಗಳಲ್ಲಿ ರೂಪದರ್ಶಿಗಳನ್ನು ಕೂರಿಸಿಕೊಂಡು ಕೂಡಾ ಇವರು ಚಿತ್ರಗಳು ರಚಿಸುತ್ತಿದ್ದರು.

ಕೆಲಕಾಲ ಕರ್ನಾಟಕ ಲಲಿತಕಲಾ ಅಕಾಡೆಮಿಯ ಸದಸ್ಯರೂ ಆಗಿದ್ದ ಕುಕ್ಕೆಯವರು, ಅಕಾಡೆಮಿಯ ವತಿಯಿಂದ ರಾಜಾಸ್ಥಾನದ ಬನಸ್ಥಳಿ ಹಾಗೂ ಶ್ರವಣಬೆಳಗೊಳದ ಭಿತ್ತಿ

ಚಿತ್ರಗಳ ಪುನರ್ರಚನೆ (ನಕಲು)ಗಳನ್ನು ಅಲ್ಲಿಯೇ ರಚಿಸಿಕೊಂಡು ಬರಲು ನಿಯೋಜಿಸಿದ್ದ ತಂಡಗಳಲ್ಲಿ ಸೇರಿ ಅಲ್ಲಿನ ಭಿತ್ತಿಚಿತ್ರಗಳನ್ನು ನಕಲು ಮಾಡಿಕೊಂಡು ಬಂದಿದ್ದರು. ಅಲ್ಲದೆ ಹತ್ತಿರದ ಲೇಪಾಕ್ಷಿಗೂ ಅನೇಕ ಬಾರಿ ಭೇಟಿ ಕೊಟ್ಟು ಅಲ್ಲಿನ ಭಿತ್ತಿ ಚಿತ್ರಗಳನ್ನೂ ನಕಲು ಮಾಡಿಕೊಂಡು ಬಂದರು.

ಭಾರತೀಯ ಸಂವೇದನೆಗಳಿಗನುಗುಣವಾಗಿ, ವೈಯಕ್ತಿಕವಾದ ತಂತ್ರ ಶೈಲಿ, ಕಲಾ ನೈಪುಣ್ಯತೆಗಳಿಂದ ಸಾಂಪ್ರದಾಯಿಕ ಕಲೆಯ ಮೂಲಭೂತ ಸತ್ವಗಳನ್ನು ರಕ್ತಗತ ಮಾಡಿಕೊಂಡು, ಭಾರತೀಯ ಕಾವ್ಯ ಪುರಾಣ ಇತಿಹಾಸಗಳ ಸತ್ವಭರಿತ ಸನ್ನಿವೇಶಗಳ ಭಾಷಿಕ ರೂಪದಲ್ಲಿನ ಕಥೆಗೆ ಯಥಾವತ್ತಾದ ಚಿತ್ರರೂಪ ಕೊಡುವ ಆಶಯ ಕುಕ್ಕೆಯವರದು.

ದೃಗ್ದರ್ಶನದ ದೃಷ್ಟಿಯಿಂದ, ಪಾಶ್ಚಿಮಾತ್ಯ ಕಲಾವಿದರಂತೆ ಶರೀರ ಶಾಸ್ತ್ರದ ಸೂಕ್ಷ್ಮಾತಿಸೂಕ್ಷ್ಮಗಳನ್ನು ತೀವ್ರವಾಗಿ ಪರಿಗಣಿಸದೇ ಭಾರತೀಯ ಕಲಾ ಶೈಲಿಗೆ ಪೋಷಕವಾಗುವಂತಹ ನೀಳರೇಖೆಗಳ ಆಕಾರ ಯೋಜನೆಯಲ್ಲಿನ ತರಂಗಿತತೆ (Rhythm) ಮತ್ತು ನೆಳಲು ಬೆಳಕಿನ ನವಿರಾದ ಯೋಜನೆ ಇವೆಲ್ಲಾ ಕುಕ್ಕೆಯವರ ಸಂದರ್ಭ ಚಿತ್ರಣ (Illustration) ಪ್ರಜ್ಞೆಯನ್ನು ಪ್ರತಿಬಿಂಬಿಸುತ್ತವೆ.

ಭಾವಚಿತ್ರ, ಸಂಯೋಜನೆ, ಪ್ರಕೃತಿ ಚಿತ್ರಣ, ಸಂದರ್ಭ ಚಿತ್ರಣ, ಹೀಗೆ ನೂರಾರು ಬಗೆಯ ಕೃತಿಗಳು ಅವರ ಕುಂಚದಲ್ಲಿ ರಚಿತವಾಗಿವೆ. ಸಾಂದ್ರವಾದ ಅನುಭವದೊಂದಿಗೆ ಪೂರಕ ವರ್ಣಗಳನ್ನು ಬಳಸಿಕೊಂಡು ಚಿತ್ರವತ್ತಾದ ನಿರೂಪಣೆಯಿಂದ ಪ್ರಾಚೀನ ಕಾವ್ಯಗಳಲ್ಲಿ ವರ್ಣಿತವಾದ ವಾಸ್ತುವೈವಿಧ್ಯದ ಗೃಹ, ಮಂದಿರ, ಮಂಟಪ, ಇವುಗಳ ಚಿತ್ರಣ, ಸಾಲಂಕೃತ ವ್ಯಕ್ತಿ ಚಿತ್ರಣಗಳಿಗೆ ಪೂರಕವಾದ ವೇಷಭೂಷಣಗಳು, ಸುತ್ತಲ ರಮ್ಯಪ್ರಕೃತಿ, ರಸನಿಷ್ಠೆ, ಭಾವನಾಹಚರ್ಯ ಇವು ನಮ್ಮನ್ನು ಶತ ಶತಮಾನಗಳ ಹಿಂದಿನ ಪರಿಸರಕ್ಕೆ ಕರೆದೊಯ್ಯುತ್ತವೆ.

ದಿವಂಗತ ಕುಕ್ಕೆಯವರ ತೀರ್ಥರೂಪರಾದ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ದೊಡ್ಡ ಸಂಸ್ಕೃತ ವಿದ್ವಾಂಸರಾಗಿದ್ದು, ಕನ್ನಡ ಮೇಘ ಸಂದೇಶ, ಕಿರಾತಾರ್ಜುನೀಯ ಮುಂತಾದ ಅನೇಕ ಕಾವ್ಯಗಳನ್ನು ರಚಿಸಿದವರು. ಈ ಕಾವ್ಯಗಳ ರಸಮಯ ಸನ್ನಿವೇಶನಗಳ ವರ್ಣನೆಯ ಪ್ರಭಾವ ಕುಕ್ಕೆಯವರ ಮೇಲಾಗಿದ್ದು, ಈ ಕಾವ್ಯ ಸಂದರ್ಭಗಳನ್ನು ದೃಶ್ಯರೂಪದಲ್ಲಿ ತೋರಿಸುವ ಆದಮ್ಯ ಸಂವೇದನೆ ಅವರನ್ನು ಚಿತ್ರ ರಚನೆಗೆ ಪ್ರೇರೇಪಿಸಿರಬಹುದು. ಆದುದರಿಂದಲೇ ಅವರ ಚಿತ್ರವನ್ನು ವೀಕ್ಷಿಸುವಾಗ ರಾಮಾಯಣ, ಮಹಾಭಾರತ, ಭಾಗವತ, ದೇವೀಭಾಗವತಗಳೇ ಅಲ್ಲದೆ ಇತರ ಗ್ರಂಥಗಳ ಪರಿಚಯವಿಲ್ಲದವರಿಗೆ ಅವರ ಚಿತ್ರ ವಸ್ತುಗಳು ಒಗಟಾಗಿ ಮುಂದೆ ನಿಲ್ಲುತ್ತವೆ.

ಕುಕ್ಕೆಯವರು ರಚಿಸಿದ ಭಾವಚಿತ್ರಗಳಲ್ಲಿ ಪ್ರಮುಖವಾದುದು ಶೃಂಗೇರಿ ಜಗದ್ಗುರು ಶ್ರೀ ನರಸಿಂಹಭಾರತೀ ಸ್ವಾಮಿಗಳ ಬೃಹತ್ ಕೃತಿ. ಪೂಜ್ಯ ಗುರುಗಳ ಪ್ರಶಾಂತ ತೇಜಸ್ವೀ ಮುಖಮಂಡಲ, ಲಲಾಟದಲ್ಲಿ ವಿರಾಜಿಸುವ ತ್ರಿಪುಂಡ ವಿಭೂತಿ, ರುದ್ರಾಕ್ಷಿ ಮಾಲೆ, ಕೃಷ್ಣಾಜಿನದ ಮೇಲೆ ಕುಳಿತಿರುವ ಧೀರಗಂಭೀರ ಭಂಗಿ, ಪ್ರಕಾಶದಿಂದ ಉದ್ದೀಪಿತವಾದ ನೇತ್ರಗಳು ಗಮನಾರ್ಹವಾಗಿವೆ. ಇಷ್ಟೇ ಪರಿಣಾಮಕಾರಿಯಾದ ಮತ್ತೊಂದು ಚಿತ್ರ ಪಂಡಿತ ರತ್ನ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳದು. ವಿಶೇಷವಾಗಿ ಶಾಸ್ತ್ರಿಗಳು ಮಧ್ಯರಾತ್ರಿಯಲ್ಲಿ ಅಧ್ಯಯನ ನಿರತರಾಗಿರುವ ಕೃತಿ. ರಾತ್ರಿಯ ನೀರವತೆಯಲ್ಲಿ ಲಾಂದ್ರದ ಬೆಳಕಿನಡಿಯಲ್ಲಿ

ಕೆಂಪಂಚಿನ ಹಸಿರು ಶಾಲು ಹೊದೆದು ವ್ಯಾಸಪೀಠದೆದುರು ಕುಳಿತು ರಾತ್ರಿಯ ನಿದ್ರೆಯನ್ನು ಮೆಟ್ಟಿ ಅಧ್ಯಯನಾಕಾಂಕ್ಷಿಗಳಾಗಿ ಕುಳಿತಿರುವ ಭಂಗಿ ಅತ್ಯಾಕರ್ಷಕವಾಗಿದೆ.

ಇನ್ನು ರಾಮಾಯಾಣ, ಭಾರತ, ಭಾಗವತ, ದೇವೀಭಾಗವತದ ವಸ್ತುವನ್ನುಳ್ಳ ಚಿತ್ರಗಳೆಂದರೆ "ಋಷ್ಯ ಶೃಂಗರನ್ನು ವಾರಾಂಗನೆಯರು ಅಂಗ ರಾಜ್ಯದ ರಾಜ ರೋಪಪಾದನ ರಾಜಧಾನಿಗೆ ಕರೆದೊಯ್ಯುತ್ತಿರುವ ದೃಶ್ಯ. ಸ್ತ್ರೀಯರನ್ನೇ ಅದುವರೆಗೆ ಕಂಡಿರದ ಋಷ್ಯಶೃಂಗ ರಥವೇರಿ ಕುಳಿತು ಕುತೂಹಲಾಶ್ಚರ್ಯಗಳಿಂದ ತನ್ನೆದುರಿನಲ್ಲಿ ನರ್ತಿಸುತ್ತಿರುವ, ವಾದ್ಯಗಳನ್ನೂದುತ್ತಿರುವ, ಫಲಪುಷ್ಪಗಳನ್ನೂ, ಖಾದ್ಯ ವಸ್ತುಗಳನ್ನೂ ನಿವೇದಿಸುತ್ತಿರುವ ಮತ್ತು ತನ್ನ ಇಕ್ಕೆಲಗಳಲ್ಲಿಯೂ ಚಾಮರಗಳನ್ನು ಬೀಸುತ್ತಿರುವ ಪ್ರಮದೆಯರನ್ನು ನೋಡಿ ಚಕಿತನಾಗಿರುವ ಭಾವಪೂರ್ಣ ಮುಖಮುದ್ರೆ, ಋಷ್ಯಾಶ್ರಮದ ಪರಿಸರ ತುಂಬ ಮನೋಹರವಾಗಿ ಚಿತ್ರಿತವಾಗಿದೆ.

ಮತ್ತೊಂದು ಚಿತ್ರ ಗಂಗಾತಟದಲ್ಲಿ ರಾಮಗುಹರ ಸಮಾಗಮ. ಕೈಜೋಡಿಸಿ, ಮೊಳಕಾಲೂರಿ, ಭಕ್ತಿಭಾವದಿಂದ ಬಾಗಿರುವ "ಗುಹ"ನೆದುರು, ನಿರ್ಲಿಪ್ತ ಮನೋಭಾವದಿಂದ ಕುಳಿತಿರುವ ರಾಮ, ಮುಗ್ಧೆಯಂತೆ ನಿಂತಿರುವ ಸೀತೆ, ಶ್ರದ್ಧಾಪೂರ್ವಕವಾಗಿ ಪರಿಚರ್ಯೆಗೆ ಸನ್ನದ್ಧನಾಗಿರುವ ಲಕ್ಷ್ಮಣ ಇವರ ಮುಖಭಾವಗಳು ತುಂಬ ಪ್ರಭಾವಶಾಲಿಯಾಗಿ ಮೂಡಿ ಬಂದಿವೆ.

ಮೇನಕಾ- ವಿಶ್ವಾಮಿತ್ರರ ಚಿತ್ರ ಒಂದರಲ್ಲಿ ನರ್ತನ ಭಂಗಿಯಲ್ಲಿ ನಿಂತಿರುವ ಮೇನಕೆಯ ಮೋಹಕ ಸೌಂದರ್ಯಕ್ಕೆ ಮಾರು ಹೋಗಿರುವ ಕೃಶಾಂಗ ವಿಶ್ವಾಮಿತ್ರ ತೆಜಸ್ವಿನೇತ್ರಗಳಿಂದ ಕಾಮುವಶನಾಗಿ ನೋಡುತ್ತಿರುವ ಚಿತ್ರ ಒಂದು ಅಪೂರ್ವಕಲಾಕೃತಿಯೆನ್ನಬಹುದಾಗಿದೆ.

ಇನ್ನು ಮಹಾಭಾರತ ಸನ್ನಿವೇಶ ಚಿತ್ರಗಳಾದ ಕಿರಾತಾರ್ಜುನೀಯದ ಪಾಶುಪತಾಸ್ತ್ರ ಪ್ರದಾನದಲ್ಲಿ ಕಿರಾತರೂಪಿನ ಶಿವ ಅವನ ಬೆನ್ನಿಗಂಟಿಕೊಂಡಂತೆ ಕಿರಾತಕಿಯ ರೂಪಿನಲ್ಲಿ ನಿಂತಿರುವ ಇವರ ಹಿಂದಿನ ಪ್ರಭಾವಲಯದಲ್ಲಿ ಗೋಚರಿಸುತ್ತಿರುವ ಪಾರ್ವತಿ, ಎರಡೂ ಬಾಗಣಳೂ ಮೈಗೆ ನಾಟಿ ಸತ್ತು ಬಿದ್ದಿರುವ ಮುಳ್ಳು ಹಂದಿಯ ಹಿನ್ನೆಲೆಯಲ್ಲಿ ಸುಪ್ರೀತನಾದ ಶಿವನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ನೀಡುತ್ತಿರುವ ದೃಶ್ಯ ಮನೋಜ್ಞವಾಗಿ ಮೂಡಿ ಬಂದಿದೆ.

ಇನ್ನು ಭಾಗವತದ ಕೃಷ್ಣನ ಲೀಲಾವಿಲಾಸಗಳನ್ನು ನಿರೂಪಿಸುವ ಚಿತ್ರಗಳಲ್ಲಿ ಪ್ರಮುಖವಾದುವು ಕೃಷ್ಣನು ನಂದಗೋಕುಲದಿಂದ ಮಥುರೆಗೆ ನಿರ್ಗಮಿಸುತ್ತಿರುವ ಚಿತ್ರ. ಯಮುನೆಯ ದಡದ ನಂದ ಗೋಪನ ಸುಂದರ ಸೌಧದ ಹಿನ್ನೆಲೆಯಲ್ಲಿ ರಥಾರೂಢ ಕೃಷ್ಣನ ನಿರ್ಗಮನವನ್ನು ತಡೆಯಲು ಗೋಪಿಯರು ನಡೆಸುತ್ತಿರುವ ಪ್ರತಿರೋಧ. ಚಿಂತಾಮಗ್ನನಾಗಿ ಕೈಗಳೆರಡನ್ನೂ ಕಟ್ಟಿ ಕುಳಿತಿರುವ ಕೃಷ್ಣನ ಮುಖಭಾವ, ಸುತ್ತಲ ನಿಸರ್ಗದ ಹುಲ್ಲುಗಾವಲಿನಲ್ಲಿ ಮೇಯುತ್ತಿರುವ ಹಸುಗಳೂ ಸಹ ಕೃಷ್ಣನ ಅಗಲುವಿಕೆಯನ್ನು ಸಹಿಸಲಾಗದೆ ನಿಂತಿರುವ ಭಂಗಿ. ಈ ಎಲ್ಲ ಸುಂದರ ಸಂಯೋಜನೆಯಿಂದ ಕಥೆಯ ಓಟ ಒಮ್ಮೆಲೆ ಸ್ಥಗಿತಗೊಂಡ ಒಂದುಕ್ಷಣ ಹರಳುಗಟ್ಟುವಂತೆ ಚಿತ್ರಿಸಿರುವ ಸುಂದರ ಸಂಯೋಜನೆ ನಯನ ಮನೋಹರವರಾಗಿದೆ.

ಈ ಸರಣಿಯಲ್ಲಿ ಕೃಷ್ಣನ ಗೋಪಿಕಾವಸ್ತ್ರಾಪಹರಣ, ಅಪ್ಸರೆಯರ ಜಲಕ್ರೀಡೆ ಇವುಗಳಲ್ಲದೆ ಕೃಷ್ಣ ಸುಧಾಮರ ಸಮ್ಮಿಲನ ಒಂದು ಸುಂದರ ಸಂಯೋಜನೆ. ಬಡ ಸುಧಾಮನನ್ನು ಭದ್ರಾಸನದ ಮೇಲೆ ಕೂರಿಸಿ, ತನ್ನ ಪತ್ನಿಯರನ್ನೂ ಕೈಂಕರ್ಯದಲ್ಲಿ ತೊಡಗಿಸಿ ಭದ್ರಾಸನದಡಿಯಲ್ಲಿ ತಾನು ಕುಳಿತು ಸುಧಾಮನನ್ನು ನನಗಾಗಿ ಏನು ತಂದಿರುವೆ ಎಂದು ಕೇಳುತ್ತಿರುವಂತೆ ಮತ್ತು ಸಂಕೋಚದಿಂದ ತನ್ನ ಅವಲಕ್ಕಿಯ ಗಂಟನ್ನು ಬಿಚ್ಚುತ್ತಿರುವ ಕೃಷ್ಣ ಸುಧಾಮರ ಮುಖಭಾವಗಳು, ಈ ಚಿತ್ರದಲ್ಲಿ ಮನೋಜ್ಞವಾಗಿ ಚಿತ್ರಿತವಾಗಿವೆ.

ದೇವಿಭಾಗವತದಲ್ಲಿನ ದುರ್ಗೆ ಮತ್ತು ಗಾಯಿತ್ರಿ ದೇವಿಯರ ಕಲ್ಪನೆಯಲ್ಲಿ ಅಧ್ಯಾತ್ಮಿಕ ದರ್ಶನದ ಸುಗಂಧ ಪರಿಮಳವಿದೆ. ಮೇಲೆ ತಾರಾಮಂಡಲ ಮತ್ತು ಕೆಳಗಡೆ ಉಕ್ಕುವ ಕಡಲುಗಳ ನಡುವೆ ಅಷ್ಟ ದಿಗ್ಗಜಗಳ ಮೇಲೆ ಕುಳಿತಿರುವ ದೇವಿಗಾಯತ್ರಿ ಮತ್ತು ಮಹಿಷನನ್ನು ಸಂಹರಿಸಿದ ಸಂಭ್ರಮದಲ್ಲಿ ಲೋಕಾಶಾಂತಿಯನ್ನು ಸಾರುವ ಪ್ರತೀಕವಾಗಿ ಬಲಗೈಯ ತೋರಬೆರಳನ್ನು ಮೇಲೆ ಎತ್ತಿ ಹಿಡಿದು ಎಡಗೈನಲ್ಲಿ ಘಂಟಾನಾದ ಮಾಡುತ್ತಿರುವ ಅಪರೂಪವಾದ ದುರ್ಗೆ ಅಥವಾ ಚಾಮುಂಡೇಶ್ವರಿಯ ಕಲಾಕೃತಿ, ಆ ಪುರಾಣ ಕಾವ್ಯದ ವರ್ಣನಾ ಶ್ಲೋಕಗಳ ಆಧಾರದಿಂದಲೇ ರಚಿತವಾದಂತಿದೆ.

ಇನ್ನುಳಿದ ಕಾವ್ಯ ನಾಟಕಗಳ ಸನ್ನಿವೇಶ ನಿರೂಪಣಾ ಚಿತ್ರಗಳಲ್ಲಿ ಪ್ರಮುಖವಾದುವು ಕಾಳಿದಾಸನ ಖಂಡಕಾವ್ಯ ಮೇಘ ಸಂದೇಶ; ನಾಟಕಗಳಾದ ಶಾಕುಂತಲ, ಮಾಲವಿಕಾಗ್ನಿಮಿತ್ರ ಮುಂತಾದವು. ಮೇಘ ಸಂದೇಶದ ಮೊದಲ ಚಿತ್ರದಲ್ಲಿ ಚಿತ್ರಕೂಟದ (ರಾಮಗಿರಿಯ) ಉನ್ನತ ಶಿಖರಗಳ ಮೇಲೆ ಉತ್ತರದ ತನ್ನ ಪ್ರಿಯ ಪತ್ನಿಯ ನೆಲೆಯಾದ ಅಲಕಾವತಿಯ ಕಡೆಯಿಂದ ಬೀಸುತ್ತಿರುವ ಶೀತಲ ಮಾರುತವನ್ನು ತನ್ನ ಎರಡೂ ಕೈಗಳಿಂದ ಅಲಂಗಿಸುತ್ತಿರುವ ಶಾಪಗ್ರಸ್ತ ಯಕ್ಷನ ಚಿತ್ರವಿದ್ದರೆ, ಮತ್ತೊಂದು ಚಿತ್ರದಲ್ಲಿ ತನ್ನೂರಿನ ಯಕ್ಷನು, ತನ್ನ ಪ್ರಿಯ ಪತ್ನಿಯು ತೆಳುದುಕೂಲನ್ನು ಹೊದೆದು ಅರೆ ನಗ್ನಳಾಗಿ ನಿಂತಿರುವ ಸುಂದರ ಭಂಗಿಯನ್ನು ಪ್ರಣಯೋನ್ಮಾದದಿಂದ ಅವಳ ಮುಂದೆ ಮೊಳಕಾಲೂರಿ ಪುಷ್ಪ ಒಂದನ್ನು ಹಿಡಿದು ವೀಕ್ಷಿಸುತ್ತಿರುವ ಕಲ್ಪನೆಯು ಮೂಡಿ ಬಂದಿದೆ. ಕವಿಯ ಕಾವ್ಯ ನಿರೂಪಣೆಯ ಎಲ್ಲೆಯನ್ನು ಈ ಚಿತ್ರಕಲಾವಿದನ ಕಲ್ಪನೆಯು ಮೀರಿ ನಿಂತಿದೆ.

ಪವಿತ್ರ ತಪೋವನದಲ್ಲಿ ಹುಟ್ಟಿ ಮಹರ್ಷಿಗಳಿಂದ ಪೋಷಿತಳಾಗಿ ಶಿಕ್ಷಿತಳಾಗಿ ಗಿಡಮರಗಳಿಗೆ ನೀರೆರೆಯುತ್ತಾ ಸಖಿಯರೊಂದಿಗೆ ಜಿಂಕೆಯ ಮರಿಗಳನ್ನಾಡಿಸುವ ಅಖಂಡ ಪುಣ್ಯಫಲದಂತಿರುವ ಸುಂದರ ಪುಷ್ಪ ಶಕುಂತಲೆ ದುಷ್ಯಂತನಿಗೊಲಿಯುವ ಮತ್ತು ಆಕೆ ಕಣ್ವರ ಅಣತಿಯನ್ನು ಪಡೆದು ಆಶ್ರಮವನ್ನು ಬೀಳ್ಕೊಡುತ್ತಿರುವ ಚಿತ್ರಗಳನ್ನು ನೋಡುವಾಗ ಕಾಳಿದಾಸನ ಸುಂದರ ಕಲ್ಪನೆಗಳು ಮೂರ್ತ ರೂಪದ ದೃಶ್ಯ ಪ್ರಪಂಚವಾಗಿ ಕಣ್ಣೆದುರಿನಲ್ಲಿ ನಿಲ್ಲುವವು.

ಪ್ರಕೃತಿ ಚಿತ್ರಗಳಾದ ಜೋಗ್ ಜಲಪಾತದ ದೃಶ್ಯ, ಶೃಂಗೇರಿಯ ವಿದ್ಯಾಶಂಕರ ದೇವಾಲಯ, ಬೇಲೂರು ಚನ್ನಕೇಶವ ದೇವಾಲಯ ಆಗುಂಬೆಯ ಸೂರ್ಯಾಸ್ತಮ ಈ ಚಿತ್ರಗಳು ಈ ಪ್ರಕಾರದಲ್ಲಿ ಕುಕ್ಕೆಯವರಿಗಿದ್ದ ಪ್ರೌಢಿಮೆಯನ್ನು ಎತ್ತಿ ಹಿಡಿಯುತ್ತವೆ. ಹೀಗೆ ಕುಕ್ಕೆಯವರು ತಮ್ಮ ಹಿಂದೆ ಅನೇಕ ರಮ್ಯ ಕಲಾಕೃತಿಗಳನ್ನು ಬಿಟ್ಟು ಹೋಗಿರುವರು. ಕರ್ನಾಟಕದ ಚಿತ್ರ ಕಾಲವಿದರ ಶ್ರೇಣಿಯಲ್ಲಿ ಕುಕ್ಕೆಯವರಿಗೆ ಒಂದು ವಿಶೇಷ ಸ್ಥಾನವಿದೆ.



## ಕುಕ್ಕೆಯವರ ವ್ಯಕ್ತಿತ್ವ – ಸೃಜನಶೀಲ ಕಲಾವಂತ:

ಚಿತ್ರಕಲೆಗಾಗಿಯೇ ಜನಿಸಿದರೋ ಎನ್ನುವ ಹಾಗೆ ನಿಷ್ಕಪಟವಾದ ಸರಳ ಜೀವನ ನಡೆಸಿದ, ಮೇಧಾವಿ, ಸುಪ್ರಸಿದ್ಧ ಚಿತ್ರಕಲಾವಿದರು – ಶ್ರೀಕಂಠ ಶಾಸ್ತ್ರಿ ಕುಕ್ಕೆ (ಎಸ್.ಎಸ್. ಕುಕ್ಕೆ). ಹತ್ತೊಂಬತ್ತನೇ ಶತಮಾನದ ಪ್ರಖ್ಯಾತ ವಿದ್ವತ್ ಪರಂಪರೆಗೆ ಸೇರಿದ ಪಂಡಿತರತ್ನಂ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು ಮತ್ತು ಸಂಕಮ್ಮನವರ ಕಿರಿಯ ಪುತ್ರರು – ಎಸ್.ಎಸ್. ಕುಕ್ಕೆ. ಜೂನ್ ೧, ೧೯೧೮ ರಂದು ಶಿವಮೊಗ್ಗದಲ್ಲಿ ಜನಿಸಿದರು.

ಎಸ್. ಎಸ್. ಕುಕ್ಕೆಯವರ ಶತಮಾನೋತ್ಸವ ಸಂದರ್ಭದಲ್ಲಿ ಲಲಿತಕಲಾ ಅಕಾಡಮಿ ಕುಕ್ಕೆಯವರ ಚಿತ್ರಕಲಾ ಪ್ರಪಂಚದಲ್ಲಿ ಮಾಡಿರುವ ಸಾಧನೆಯನ್ನು ಪುನಃ ಪರಿಚಯಿಸುತ್ತಿರುವುದು ಸ್ತುತ್ಯಾರ್ಹ. ವಿ. ಟಿ. ಎಸ್. ರಾವ್ ೧೯೯೭ ರಲ್ಲಿ ಬರೆದಿರುವ ಪುಸ್ತಕವನ್ನು ಪುನರ್ಮುದ್ರಣ ಮಾಡುವ ಸಮಯದಲ್ಲಿ ಇಂದಿನ ಅಧ್ಯಕ್ಷರಾದ ಚಿತ್ರಗಾರ್ತಿ ಪ್ರೊ. ಎಮ್. ಜೆ. ಕಮಲಾಕ್ಷಿಯವರು ಕುಕ್ಕೆಯವರ ವೈಯಕ್ತಿಕ ಜೀವನದ ಬಗ್ಗೆ ಕೆಲವು ಘಟನೆಗಳನ್ನು ಬರೆಯಬೇಕೆಂದು ಆಪೇಕ್ಷೆಪಟ್ಟು ಕುಕ್ಕೆ ಕುಟುಂಬವನ್ನು ಕೇಳಿದ್ದು ನಮ್ಮ ಸೌಭಾಗ್ಯ.

ಕುಕ್ಕೆಯವರು ಒಬ್ಬ ಸ್ವಯಂಪ್ರೇರಕ ಚಿತ್ರಕಲಾ ತಪಸ್ವಿ! ಅಭಿಜಾತ ಕಲಾವಿದರು. ತನು–ಮನ–ಧನಗಳನ್ನು ಲೆಕ್ಕಿಸದೆ ಚಿತ್ರಕಲೆಯನ್ನು ಏಕಸಂಧಿಗ್ರಾಹಿಯಾಗಿ ಹಿರಿಯ ಕಲಾಚಿತ್ರಗಾರನಾಗಿ ಬಾಳಿದವರು. ಇಂದಿನ ದಿವಸಗಳಲ್ಲಿ ಚಿತ್ರಕಲೆಗೆ ಇರುವ ಮಹತ್ವ–ಮೌಲ್ಯ ಅವರ ಕಾಲದಲ್ಲಿರಲಿಲ್ಲವಾದರೂ, ಕುಕ್ಕೆಯವರು ಚಿತ್ರಗಳನ್ನು ಅವರ ಜೀವದ ಉಸಿರಿನಷ್ಟೇ ಸಹಜವಾಗಿ ಬಿಡಿಸುತ್ತಿದ್ದರು; ನಾನು ಸ್ವತಃ ಕುಕ್ಕೆಯವರ ಜೀವನವನ್ನು ಕಂಡು ದಿಗ್ಭ್ರಮೆಗೊಂಡಿದ್ದೇನೆ. ಮುಗ್ಧ ಮನಸ್ಸಿನ, ಸರಳವಾದ ನೇರ ನಡತೆಯ ಮಹಾನುಭಾವರು. ಜೊತೆಗೆ ಸಾಧಿಸಿಯೇ ತೀರುತ್ತೇನೆ ಎನ್ನುವ ಹಠ ಇತ್ತು. ಮತ್ತೊಂದು ವಿಶೇಷವೆಂದರೆ – ಇವರ ಜೀವನದಲ್ಲೂ ಮತ್ತು ಕಲಾಕೃತಿಗಳಲ್ಲೂ ಚೊಕ್ಕವಾದ, ಪ್ರಾಮಾಣಿಕವಾದ, ವಿಶ್ವಾಸಾರ್ಹತೆ ಎದ್ದು ಕಾಣುತ್ತದೆ, "ಮೇನಕಾ ವಿಶ್ವಾಮಿತ್ರ, ಕುಮಾರ ಸಂಭವ, ಮೇಘ–ಸಂದೇಶ, ಗಾಯತ್ರಿ, ದುರ್ಗಾ, ಮಹಿಷಾಸುರಮರ್ದಿನಿ" ಹೀಗೆ ಹಲವಾರು ಚಿತ್ರಗಳನ್ನು ಬಿಡಿಸುವ ಮುನ್ನ ಅವರ ತೀರ್ಥರೂಪ ಪಂಡಿತರತ್ನಂ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳೊಡನೆ ಮತ್ತು ಅವರ ಸೋದರ ಕುಕ್ಕೆ ಸೀತಾರಾಮ ಶಾಸ್ತ್ರಿಗಳೊಡನೆ ಪ್ರಾಚೀನ ಕಾವ್ಯಗಳ ಸೂಕ್ಷ್ಮತೆಗಳ ಬಗ್ಗೆ ಸಮಾಲೋಚಿಸಿ ಅವರ ಸೂಕ್ತ ಸಲಹೆಯನ್ನು ಪಡೆಯುತ್ತಿದ್ದರು. ಕುಕ್ಕೆಯವರು, ಅಸಾಮಾನ್ಯ ಚಿತ್ರಕಲಾವಿದರಾಗಿದ್ದರೂ, ತಮ್ಮ ಚಿತ್ರಕಲಾ ನೈಪುಣ್ಯತೆಗೆ ಎಂದೂ ಆತ್ಮಪ್ರಾಶಸ್ತ್ಯ ಕೊಟ್ಟವರಲ್ಲ.

ಕುಕ್ಕೆಯವರು ಸ್ವತಂತ್ರ ಮನೋಧರ್ಮದವರು. ಅವರು ಮೈಸೂರಿನಲ್ಲಿ ಕಲಾ ಶಿಕ್ಷಣ ಮುಗಿಸಿ ಶಿವಮೊಗ್ಗಕ್ಕೆ ಹಿಂದಿರುಗಿದಾಗ ಒಂದು ಸರ್ಕಸ್ ಸಂದರ್ಶನದಿಂದ ಮನಸ್ಸನ್ನು ಬೇರೆಕಡೆ ತಿರುಗಿಸಿದರು. ಏಳೆಂಟು ವರ್ಷಗಳ ಕಾಲ ಇವರ ದಾರಿಯೇ ಬೇರೆಯಾಯಿತು. ಘುಮಟ್ ಬಾಲ್, ಬ್ಯಾಡ್ಮಿಂಟನ್ ಗಳಿಗೆ ಆಕರ್ಷಿತರಾದರು. ವ್ಯಾಯಾಮ, ಕುಸ್ತಿ ಮುಂತಾದುವುಗಳಿಂದಾಗಿ ಇವರು ಚಿತ್ರಕಲಾಭ್ಯಾಸದ ಕಡೆ ಗಮನ ಕಡಿಮೆಯಾಯಿತು. ಅಂಥಹ ಸಂದರ್ಭದಲ್ಲಿ, ಅವರ ತೀರ್ಥರೂಪರು ಮಗನಿಗೆ ಎಚ್ಚರಿಸುತ್ತಿದ್ದರು.

ಚಿತ್ರಕಲೆ ಕುಕ್ಕೆಯವರ ಜೀವನದ ದಿವ್ಯ 'ಮಂತ್ರ' ವಾಗಿತ್ತು. ಇವರನ್ನು ಕಾಣಲು

ಬಂದವರನ್ನು ಹೃದಯ ತುಂಬಿ ಆದರಿಸಿ, ಮಾತನಾಡಿಸಿ ಕಳಿಸುತ್ತಿದ್ದರು. ಒಳ್ಳೆಯ ಸಾಹಿತ್ಯ-ಕಲಾ ಸಂಸ್ಕಾರವಂತರಾಗಿರುವ ಇವರು ರಚಿಸಿದ್ದ ಒಂದೊಂದು ಕೃತಿಯೂ ಅಪಾರ ಶ್ರಮದ ಕುಸುರಿಯ ಕೆಲಸವಾಗಿ ಬಹು ಬೆಲೆ ಬರುವಂತಿರುತ್ತಿತ್ತು. ಕೆಚ್ಚೆದೆಯ ಸಾಹಸಿ, ಕುಕ್ಕೆಯವರು. ಹೃದಯವಂತ ಸೋದರ ಕಲಾವಿದರ ಬಗ್ಗೆ ಇವರಿಗೆ ಒಳ್ಳೆಯ ಭಾವನೆ; ಅತಿಥಿ ಸತ್ಕಾರ ಇವರಮನೆತನಕ್ಕೆ ತಂದ ಕೀರ್ತಿಯನ್ನು ಕುಕ್ಕೆಯವರು ಉಳಿಸಿಕೊಂಡು ಬಂದಿದ್ದರು. ಅವರ ಹೃದಯ ಒಂದು ರೀತಿಯಲ್ಲಿ 'ಕಲ್ಲು ಸಕ್ಕರೆ' ಯಂತೆ! ನೋಡಲು ಕಠಿಣವಾದರೂ ರುಚಿಯಲ್ಲಿ ಸವಿಯಾದಂತೆ, ಅಪ್ಪಟವಾದದ್ದು - ಅವರ ಕಲೆಗಾರಿಕೆಯ ಹಾಗೆ. ವರ್ಣ ಚಿತ್ರಕಲೆಯಲ್ಲಿ ಇವರದು ಎತ್ತಿದ ಕೈ!

**ನಳಿನಿ ಕುಕ್ಕೆ**
**ಮೇರಿಲ್ಯಾಂಡ್, ಯು.ಎಸ್.ಎ.**

## ಚಿಕ್ಕಪ್ಪನ ಕುರಿತು ಮನದಾಳದ ಮಾತು:

ನನ್ನ ಪ್ರೀತಿಯ ಚಿಕ್ಕಪ್ಪ ಎಸ್. ಎಸ್. ಕುಕ್ಕೆಯವರನ್ನು ನಾನು ಕರೆಯುತ್ತಿದ್ದುದು 'ಶ್ರೀಕಂಠ ಎಂದು. ಮಲೆನಾಡಿನ ಅಭ್ಯಾಸವೋ ಅಥವಾ ನಮ್ಮ ಮನೆಯ ವಾಡಿಕೆಯೋ ತಿಳಿಯದು. ನಮ್ಮ ಮನೆಯಲ್ಲಿ ಹಿರಿಯ-ಕಿರಿಯರೆಲ್ಲರನ್ನೂ ಮೊದಲನೇ ಹೆಸರಿನಿಂದಲೇ ಕರೆಯುತ್ತಿದ್ದೆವು. ತಂದೆ-ತಾಯಿಯ ಸ್ಥಾನದಲ್ಲಿದ್ದರು ನನಗೆ ಈ ಚಿಕ್ಕಪ್ಪ .

ನಮ್ಮ ಮನೆ ತುಂಬಾ ಮಕ್ಕಳು. ಶ್ರೀಕಂಠ ಬೆಂಗಳೂರಿನಿಂದ ಶಿವಮೊಗ್ಗೆಗೆ ಆಗಾಗ್ಗೆ ಬರುತ್ತಿದ್ದರು. ಅವರು ಬಂದರೆ ನಮಗೆ ಭಾರಿ ಖುಷಿ! ಮಕ್ಕಳೊಡನೆ ಮಗುವಾಗಿ ಹಲವಾರು ಆಟಗಳನ್ನಾಡಿಸುತ್ತಿದ್ದರು. ಮತ್ತೊಂದು ವಿಶೇಷವೆಂದರೆ - ಅವರು ಸ್ವಭಾವತಃ ಎತ್ತರವಾಗಿ ದಢೂತಿಯಾದ ಮನುಷ್ಯ, ಜತೆಗೆ ವ್ಯಾಯಾಮ, ಕುಸ್ತಿಗಳನ್ನಾಡಿದ್ದ ಕಾರಣವೇನೋ ಅವರ ಮೈ ಒಳ್ಳೆ ಕಲ್ಲಿನಹಾಗೆ ಭಾಸವಾಗುತ್ತಿತ್ತು. ನಾವು ಹುಡುಗರು ಅವರ ಮೇಲೆ ಮರ ಹತ್ತಿದ ಹಾಗೆ ಹತ್ತಿ ಬೈಸೆಪ್ಸ್ ಹಿಡಿದುಕೊಂಡು ನೇತಾಡುವಾಗ ಅವರು ಗಿರಿಗಿಟ್ಟಲೆ ಹಾಗೆ ಗಿರ್ ಅಂತ ಸುತ್ತುತ್ತಿದ್ದರು. ಖುಶಿಯಾಗಿ ತಾರಾಸ್ಥಾಯಿಯಲ್ಲಿ ಎಲ್ಲರೂ ಒಟ್ಟಿಗೆ ಕಿರುಚುತ್ತಿದ್ದೆವು! ನಮ್ಮ ಸಂತೋಷಕ್ಕೆ ಪಾರವೇ ಇರಲಿಲ್ಲ.

ನಮ್ಮ ಶಿವಮೊಗ್ಗದಲ್ಲಿ ಕಾಮನ ಹುಣ್ಣಿಮೆಯ ದಿನ ನರಸ ಅಂತ ಒಬ್ಬ ಹುಲಿವೇಷ ಹಾಕಿಕೊಂಡು ಮೆರವಣಿಗೆಯಲ್ಲಿ ಕುಣಿಯುತ್ತಿದ್ದ. ಅವನಿಗೆ ಶ್ರೀಕಂಠ ಹುಲಿವೇಷದ ಮೇಕಪ್ ಮಾಡುತ್ತಿದ್ದರು. ನಾನೇ ಹುಲಿವೇಷ ಹಾಕಿ ಕುಣಿಯುತ್ತಿದ್ದೀನೇನೋ ಅನ್ನುವಷ್ಟು ಅವರು ಹಾಕುತ್ತಿದ್ದ ಬಣ್ಣಗಳಲ್ಲಿ ಮುಳುಗಿರುತ್ತಿದ್ದೆ. ಹುಲಿಯನ್ನೇ ನೋಡುತ್ತಿದ್ದೇನೋ ಅನ್ನುವಷ್ಟು ಸುಂದರವಾಗಿ ಬಣ್ಣ ಹಾಕುತ್ತಿದ್ದರು. ಊರಿನವರಿಗೆಲ್ಲಾ ಅದೊಂದು ಸುಗ್ಗಿಯ ಸಂಭ್ರಮ. ಮರೆಯಲಸಾಧ್ಯವಾದ ಕಾಮನ ಹುಣ್ಣಿಮೆಯ ನೆನಪು!

ಹೀಗೆ ಮತ್ತೊಂದು ಸುಂದರ ನೆನಪು - ನನಗೆ ಗಣಪತಿಯ ಹಬ್ಬಕ್ಕಿಂತ ಶ್ರೀಕಂಠ ಎರೇಮಣ್ಣಿನಲ್ಲಿ ಸೃಷ್ಟಿಸುತ್ತಿದ್ದ ಸುಂದರವಾದ ಗಣಪತಿಯನ್ನು ನೋಡುವುದಕ್ಕೆ ಕಾಯುತ್ತಿರುತ್ತಿದ್ದೆ - ನಾಟ್ಯ ಗಣಪತಿ, ಬಲಮುರಿ ಗಣಪತಿ, ಹೀಗೆ ವಿಧ-ವಿಧವಾದುದ್ದನ್ನು ಪ್ರತಿ ವರ್ಷವೂ

ಮಾಡುತ್ತಿದ್ದರು. ನನಗೆ ಬಹಳ ಇಷ್ಟವಾದದ್ದು – ಕೋರೆಹಲ್ಲು ಮುರಿದು, ಕೈಯಲ್ಲಿ ಎತ್ತಿ ಬೀಸಿ ಚಂದ್ರನಿಗೆ ಹೊಡೆಯುವ ಭಂಗಿ! ಅತ್ಯದ್ಭುತವಾದ ಗಣಪತಿಯ ಭಂಗಿ, ಮತ್ತೆ ಮತ್ತೆ ನೆನಸಿಕೊಂಡು ಆನಂದಿಸುತ್ತೇನೆ.

ಬೇಸಗೆ ದಿನಗಳಲ್ಲಿ ಬೆಂಗಳೂರಿಗೆ ನಾನು, ನನ್ನ ಅಕ್ಕಂದಿರು, ಜಯ ಮತ್ತು ಶಾಂತ ಶ್ರೀಕಂಠನ ಮನೆಗೆ ಹೋಗುತ್ತಿದ್ದೆವು. ಬಹಳ ಸಣ್ಣ ಮನೆ, ಅಡಿಗೆ ಕೋಣೆ ಮತ್ತೊಂದು ಹಾಲ್ ಅಥವಾ ರೂಂ ಎನ್ನಬಹುದು, ಅಷ್ಟೆ! ಪಕ್ಕದಲ್ಲೇ ಸ್ವಲ್ಪ ದೂರದ ಓಣಿಯಲ್ಲಿ ಒಂದು ಬಚ್ಚಲುಮನೆ. ಆ ಮನೆಯಲ್ಲಿ ನಾವು ಮೂರು ಜನ, ರಾಜಮ್ಮ ಚಿಕ್ಕಮ್ಮ, ಅವರ ಮಕ್ಕಳು, ನಟರಾಜು ಮತ್ತು ಜಯರಾಂ ಇಷ್ಟು ಜನ ಹಾಲ್‌ನಲ್ಲಿ ಮಲಗುತ್ತಿದ್ದೆವು. ಶ್ರೀಕಂಠ ಅಡಿಗೆ ಮನೆಯಲ್ಲಿ ಒಂದು ಮೂಲೆಯಿಂದ ಮತ್ತೊಂದು ಮೂಲೆಗೆ ತಲೆ ಹಾಕಿ ಓರೆ–ಕೋರೆಯಾಗಿ ಮಲಗುತ್ತಿದ್ದರು. ಅಷ್ಟೇ ಅಲ್ಲ – ಅಂದಿನಿಂದ ನಾನು ಅಮೆರಿಕಾಗೆ ವಲಸೆ ಹೋಗುವವರೆಗೂ, ನಂತರ ಅವರನ್ನು ಭೇಟಿ ಮಾಡಿದಾಗಲೆಲ್ಲಾ, ನನ್ನ ಚಿಕ್ಕಮ್ಮ– ರಾಜಮ್ಮ ಪ್ರೀತಿಯಿಂದ ಊಟ–ತಿಂಡಿ ಕೊಡದೆ ಕಳುಹಿಸುತ್ತಿರಲಿಲ್ಲ – ಆಕೆ ಅನ್ನಪೂರ್ಣೇಶ್ವರಿ! ನಾವು ಚಿಕ್ಕ ಹುಡುಗರಾಗಿದ್ದರಿಂದಲೋ ಏನೋ, ಆ ದಿನಗಳಲ್ಲಿ ನಮಗೆ ಅವರ ಆರ್ಥಿಕ ಪರಿಸ್ಥಿತಿ ಅರ್ಥವಾಗಿರಲಿಲ್ಲ.

೧೯೬೩–೬೮ರ ಅವಧಿಯಲ್ಲಿ ನಾನು ಬೆಂಗಳೂರಿನಲ್ಲಿ ಓದುತ್ತಿದ್ದೆ; ನನ್ನ ಮತ್ತು ಶ್ರೀಕಂಠನ ಮನೆಯವರ ಸಂಪರ್ಕ ಜಾಸ್ತಿ ಇತ್ತು. ಚಿಕ್ಕಪೇಟೆಯಲ್ಲಿದ್ದ ಅವರ 'ಕುಕ್ಕೆ ಬ್ರದರ್ಸ್ ಸ್ಟುಡಿಯೋ' ಗೆ ಆಗಾಗ ಹೂಗುತ್ತಿದ್ದೆ. ಅವರನ್ನು ಕಾಣಲು ಹೋದಾಗಲೆಲ್ಲಾ ತಪ್ಪದೆ ಕೃಷ್ಣಾ ಕೆಫೆ ಯಲ್ಲಿ ಮಸಾಲೆ ದೋಸೆ ಮತ್ತು ಕಾಫಿ' ಕೊಡಿಸುತ್ತಿದ್ದರು. ನಂತರ ಅವರ ಸ್ಟೂಡಿಯೋಗೆ ಹೋಗಿ ಅವರು ಚಿತ್ರಬಿಡಿಸುತ್ತಿದ್ದಾಗ ನೋಡುತ್ತಾ ಇರುವಾಗ ಕಾಲ ಕಳೆದಿದ್ದೇ ಗೊತ್ತಾಗುತ್ತಿರಲಿಲ್ಲ. ಒಂದು ಸಲ – ನನ್ನ ಅಮ್ಮನ ಚಿತ್ರ ಬರೆದುಕೊಡುತ್ತೀಯಾ? ಅಂತ ಕೇಳಿದೆ. ಉತ್ತರಿಸದೆ ಎವೆಯಿಕ್ಕದೆ ಎಲ್ಲೋ ನೋಡಿ, ಕೆಲವು ನಿಮಿಷಗಳ ನಂತರ ಇದ್ದಕ್ಕಿದ್ದಹಾಗೆ ಧಾರಾಕಾರವಾಗಿ ಅತ್ತುಬಿಟ್ಟರು. ಕೇಳಿದ್ದು ತಪ್ಪಾಯಿತೇನೋ ಅಂತ ನನಗೆ ನನ್ನ ಮೇಲೆ ತುಂಬಾ ಬೇಜಾರಾಯಿತು. ಸಮಾಧಾನ ಮಾಡಿಕೊಂಡು ಹೀಗೆ ಹೇಳಿದರು – ಗೋಪಾಲ, ನಾನು ಶಿವಮೊಗ್ಗದಲ್ಲಿದ್ದಾಗ ಕಸರತ್ತು–ಕುಸ್ತಿ ಮಾಡಿ, ಫುಟ್ ಬಾಲ್ ಆಡಿ ಸುಸ್ತಾಗಿ ಮನೆಗೆ ಬಂದಾಗ, ಹಿರಿಯರಿಗೆಲ್ಲಾ ಅಸಮಾಧಾನವಾಗಿರುತ್ತಿತ್ತು, ಆದರೆ, ಇಂದಿರಮ್ಮ, ನಿನ್ನ ಅಮ್ಮ, ನನ್ನನ್ನು ಮಗನಂತೆ ನೋಡಿಕೊಳ್ಳುತ್ತಿದ್ದರು. ನಾನು ಮನೆಗೆ ತಡವಾಗಿ ಬಂದ ದಿನಗಳಲ್ಲಿ ಊಟವನ್ನು ಒಂದು ತಟ್ಟೆಯಲ್ಲಿ ಹಾಕಿ, ಮುಚ್ಚಿಕೊಂಡು ಮಹಡಿಯ ಮೇಲೆ ತಂದುಕೊಡುತ್ತಿದ್ದರು. ಎಷ್ಟೋವೇಳೆ ನನಗೆ ದುಡ್ಡು ಸಹ ಕೊಡುತ್ತಿದ್ದರು. ನನ್ನ ಪರ ವಹಿಸಿಕೊಂಡು ಮಾತನಾಡುತ್ತಿದ್ದರು. ಇವೆಲ್ಲಾ ಸದಾ ನೆನಪಿಗೆ ಬರುತ್ತೆ ಅಂತ ಹೇಳಿದ್ದಲ್ಲದೆ, ನಾನು ಎಷ್ಟೋ ಸಲ ಅವರ ಚಿತ್ರ ಬರೆಯಲು ಕುಳಿತಿದ್ದೇನೆ, ಅವರ ತಾಯಿ ಪ್ರೇಮ ನೆನಸಿಕೊಂಡು ನನ್ನ ಕಣ್ಣುಗಳು ತೇವವಾಗಿ ನಿಲ್ಲಿಸಿಬಿಟ್ಟಿದ್ದೇನೆ'ಎಂದು ಹೇಳಿದ್ದರು. ನನ್ನ ತಾಯಿ ನಾನು ಎರಡು ವರ್ಷದಲ್ಲಿದ್ದಾಗ ಸ್ವರ್ಗಸ್ಥರಾದರು. ನನಗೆ ಅವರ ಮುಖವನ್ನು ನೋಡಿದ ನೆನಪಿಲ್ಲವಾದ್ದರಿಂದ ಅವರನ್ನು ಕೇಳಿದ್ದೆ. ಅಂದಿನಿಂದ ಯಾವತ್ತೂ ಅಮ್ಮನ ಚಿತ್ರದ ಬಗ್ಗೆ ಮಾತು–ಕತೆ ನಡೆಯಲಿಲ್ಲ. ಸ್ಟುಡಿಯೋದಲ್ಲಿ ಒಂದು ಸಲ ಹಲವಾರು ಅಪೂರ್ಣವಾದ ಕ್ಯಾನ್ವಾಸ್‌ಗಳನ್ನು ನೋಡಿ, ಏಕೆ ಮುಗಿಸಿಲ್ಲವೆಂದು ಕೇಳಿದಾಗ ಸಮಯ

ಸಿಕ್ಕಾಗ ಮುಗಿಸಬೇಕು ಅಂತ ಹೇಳಿದ್ದರು. ನಂತರದಲ್ಲಿ ನನಗೆ ಬೇರೆಯವರಿಂದ ತಿಳಿದದ್ದೇ ಬೇರೆ! ಬಣ್ಣದ ಅಭಾವದಿಂದ, ಅಂತ. ಮನಸ್ಸಿಗೆ ಸಂಕಟವಾಯ್ತು!

೧೯೭೦ರಲ್ಲಿ ನಾನು ಓದಲು ಅಮೆರಿಕಾಗೆ ಹೊರಡುವ ಮೊದಲು ಶ್ರೀಕಂಠನ ಹತ್ತಿರ ಅವರಿಗೆ ಬೇಕಾದ ಆಯಿಲ್ ಮತ್ತು ವಾಟರ್ ಕಲರ್ ಬಣ್ಣಗಳ ಪಟ್ಟಿ ಮಾಡಿಸಿಕೊಂಡು ಹೋಗಿ, ಅಂದಿನಿಂದ ಅವರು ಕೇಳಿದ ಬಣ್ಣಗಳನ್ನು, ಮತ್ತು ಸ್ಪೆಷಲ್ ಪೇಪರ್‌ಗಳುನ್ನು ಕಳುಹಿಸುತ್ತಿದ್ದೆ. ೧೯೮೨ರಲ್ಲಿ ಅವರ ತೀರ್ಥರೂಪರ ಹೆಸರಿನಲ್ಲಿ ಮಾಡಿದ ಗ್ಯಾಲರಿಯನ್ನು ನೋಡಲು ಹೋಗಿದ್ದೆ; ನನ್ನನ್ನು ನೋಡಿ ಅವರ ಕಣ್ಣುತುಂಬಾ ನೀರು ತುಂಬಿಕೊಂಡು ಗದ್ಗದ ಧ್ವನಿಯಲ್ಲಿ "ಗೋಪಾಲ, ಈ ಚಿತ್ರಗಳೆಲ್ಲಾ ನಿನ್ನದೇ, ಯಾವ ಚಿತ್ರವನ್ನಾದರೂ ತೆಗೆದುಕೊ, ಎಲ್ಲವನ್ನೂ ತೆಗೆದುಕೊ" ಎಂದರು. ಹಾಗೆಂದ ಮಾತ್ರಕ್ಕೆ ನಾನು ತೆಗೆದು ಕೊಳ್ಳಲಿಲ್ಲ. ಅಷ್ಟಕ್ಕೇ ಬಿಡದೆ ಒತ್ತಾಯ ಮಾಡಿ ಊರ್ವಶಿ-ಪುರೂರವಸ್, ಆಗುಂಬೆ ಸೂರ್ಯಾಸ್ತಮ, ಚಾಮುಂಡಿ ಬೆಟ್ಟದ ಮೇಲಿರುವ ನಂದಿ ಮತ್ತು ರಮಣ ಮಹರ್ಷಿ ತೈಲಚಿತ್ರಗಳನ್ನು ಪ್ರೀತಿಯಿಂದ ಕೊಟ್ಟರು; ಅವರು ಮಹಾ ಧಾರಾಳಿ, ವಿಶಾಲ ಹೃದಯಿ. ನನ್ನ ಮನಸ್ಸಿನಲ್ಲಿ, ಹೃದಯದಲ್ಲಿ - ಶ್ರೀಕಂಠ ಸದಾ ನೆಲಸಿದ್ದಾರೆ. ಅವರಿಂದ ನಾನು ಹಲವಾರು ಕ್ಷೇತ್ರಗಳಲ್ಲಿ ಪಾಠ ಕಲಿತಿದ್ದೇನೆ. ಅವರು ರಚಿಸಿದ ಚೈತನ್ಯಭರಿತ ಚಿತ್ರಗಳಲ್ಲಿ ಇಂದಿಗೂ, ಎಂದೆಂದಿಗೂ ಚೈತನ್ಯಮಯವಾಗಿ ಅಮರರಾಗಿತ್ತಾರೆ ಎನ್ನುವುದರಲ್ಲಿ ನನಗೆ ಸಂದೇಹವಿಲ್ಲ.

**ಗೋಪಾಲ್ ಎಸ್. ಕುಕ್ಕೆ**
**ಮೇರಿಲೆಂಡ್, ಯು.ಎಸ್.ಎ.**

* * *

## ಕೆಲವು ಅನಿಸಿಕೆಗಳು

ಕುಕ್ಕೆ ಅಂದರೆ ನಮಗೆಲ್ಲಾ ಗೊತ್ತಿರುವುದು ಬುಟ್ಟಿ ಅಂತ. ಆಗ ಸಿಗುತ್ತಿದ್ದುದು ಬೆತ್ತದ ಬುಟ್ಟಿ, ಬಿದಿರಿನ ಬುಟ್ಟಿ, ಹೂವಿನ ಬುಟ್ಟಿ, ಹುಲ್ಲಿನ ಬುಟ್ಟಿ, ಹೀಗೆ ಹಲವಾರು. ಇದ್ಯಾವ ಕುಕ್ಕೆ ವಿಷಯ ಮನೆಯಲ್ಲಿ ಮಾತಾಡುತ್ತಿರುವುದು? ಯೋಚನೆ ಮಾಡಿ ನಾವು ಮನೆಯಲ್ಲಿದ್ದ ಹುಡುಗರು ನೇರವಾಗಿ ಅಮ್ಮನ ಹತ್ತಿರ ಒಕ್ಕೊರಲಿನಿಂದ ಕೇಳಿದೆವು. ಅಮ್ಮ ಬಾಯಿ ಮೇಲೆ ಬೆರಳಿಟ್ಟು 'ಶ್' ಎಂದು ನಂತರ ತಿಳಿಸಿದರು - ನಮ್ಮ ಅಕ್ಕನ್ನ ಮದುವೆಯಾಗುವವರು, ಎಂದು. ನಾವೆಲ್ಲರೂ ವಿಷಯ ಕೇಳಿ ಸಂತೋಷದಿಂದ ಆಟ ಆಡಲು ಓಡಿದೆವು.

ಶ್ರೀ ಕುಕ್ಕೆ ಶ್ರೀಕಂಠಶಾಸ್ತ್ರಿಗಳು ಆಗ ತಾನೆ ಚಿತ್ರಕಲಾಭ್ಯಾಸ ಮುಗಿಸಿ ಶಿವಮೊಗ್ಗಕ್ಕೆ ಬಂದಿದ್ದರು. ಆಶ್ಚರ್ಯವೇನೆಂದರೆ, ಕುಕ್ಕೆಯವರು ನೃತ್ಯಾಭ್ಯಾಸವನ್ನೂ, ಮತ್ತು ಕುಸ್ತಿ ಮಾಡುವುದನ್ನೂ ಸಹ ಕಲಿತಿದ್ದರು. ಅವರ ಹುರಿಗಟ್ಟಿದ ಮೈ ನೋಡಿದರೆ ಎಂತಹವರೂ ಬೆರಗಾಗುವಂತಿದ್ದರು. ಇಲ್ಲಿ ನಮ್ಮ ಅಕ್ಕ, ರಾಜಲಕ್ಷ್ಮೀಯ ಬೆಳವಣಿಗೆ ಒಂದು ಮುಟ್ಟ



